ಕೆ. ಹರಿದಾಸ ಭಟ್

# ಹಾರುವ ತಟ್ಟೆಗಳು

ಪ್ರಚಾರಪುಸ್ತಕ ಮಾಲೆ—೨೦೪



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೩

ಪ್ರಚಾರಪುಸ್ತಕ ಮಾಲೆ—೨೦೪

# ಹಾರುವ ತಟ್ಟೆಗಳು

ಕೆ. ಹರಿದಾಸ ಭಟ್, ಎಂ.ಎಸ್ಸಿ



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೩

ಮೊದಲನೆಯ ಮುದ್ರಣ : ೧೯೭೩

೫೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಪ್ರಕಾಶಕರು

ನಿರ್ದೇಶಕರು, ಪ್ರಸಾರಾಂಗ

ಮಾನಸಗಂಗೋತ್ರಿ, ಮೈಸೂರು_570012

ಮುದ್ರಕರು

ಮಿತ್ರ ಪ್ರಿಂಟರ್ಸ್

ವಿದ್ಯಾರಣ್ಯಪುರಂ, ಮೈಸೂರು-570008

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ

ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನ ಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿ ಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವ ಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯವಾಗುತ್ತವೆ ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ಇನ್ನೂರಮೂರು ಪುಸ್ತಕಗಳು

ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗಿದೆ.

ಶ್ರೀ ಕೆ. ಹರಿದಾಸ ಭಟ್‌ರವರ 'ಹಾರುವ ತಟ್ಟೆಗಳು' ಇದೀಗ ತಾನೆ ಈ ಮಾಲೆಯಲ್ಲಿ ಹೊರಬರುತ್ತಿದೆ. ಇದು ಹೆಚ್ಚು ಜನಪ್ರಿಯ ವಾಗಲೆಂದು ಆಶಿಸುತ್ತೇನೆ.

ಮೈಸೂರು

**ದೇ. ಜವರೇಗೌಡ**
ಕುಲಪತಿಗಳು

# ಅರಿಕೆ

ಹಾರುವ ತಟ್ಟೆಗಳು ಅಥವಾ ಗುರುತಿಸಲಾರದಂತಹ ವಸ್ತುಗಳು (Unidentified Flying Objects) ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಹಲವಾರು ಭಾರಿ ಕಾಣಿಸಿಕೊಂಡಿರುವುವು. ಇವುಗಳ ವಿನ್ಯಾಸ, ಕಾಣಿಸಿಕೊಂಡ ಸಮಯ, ಪ್ರದೇಶ ಇತ್ಯಾದಿ ಮಾನವ ವೈಜ್ಞಾನಿಕ ಚಟುವಟಿಕೆಗೆ ಪ್ರತಿಕ್ರಿಯೆಯೋ ಎನ್ನುವಷ್ಟರ ಮಟ್ಟಿಗೆ ಹೋಲಿಕೆಯಿರುವುದು ಕಂಡುಬಂದಿದೆ. ಈ ತನಕ ಹಾರುವ ತಟ್ಟೆಗಳ ವಿಷಯ ಕೂಲಂಕಷವಾಗಿ ತಿಳಿದಿಲ್ಲವಾದರೂ, ಅವು ಹೊರ ನಾಗರಿಕತೆಯ ಜನಾಂಗದ ಆಕಾಶ ನೌಕೆಗಳಿರಬಹುದೆಂಬ ಅಂಶಕ್ಕೆ ಸಾಕಷ್ಟು ಆಧಾರದೊರಕಿದೆ. ಮಾನವನಿಗೆ ಒಂದುಗಾಲಕ್ಸಿಯಿಂದ ಇನ್ನೊಂದಕ್ಕೆ ಚಲಿಸಲು ಉಪಯೋಗಿಸಲು ಬೇಕಾಗಬಹುದಾದ ನೌಕೆಯ ವಿನ್ಯಾಸಕ್ಕೆ ಹಾರುವ ತಟ್ಟೆಯ ವಿಶ್ಲೇಷಣೆಯು ಭವಿಷತ್ತಿನಲ್ಲಿ ಸಹಕಾರಿಯಾದೀತು. ಬೆಳಕಿಗಿಂತ ವೇಗದಲ್ಲಿ ಚಲಿಸುವ ಕಣಗಳ (ಟೇಕೆಯಾನುಗಳು) ಅಸ್ತಿತ್ವವು ಸಧ್ಯಕ್ಕೆ ಸೈದ್ಧಾಂತಿಕ ರೂಪದಲ್ಲಿದೆ. ಇವನ್ನು ಪ್ರಾಯೋಗಿಕವಾಗಿ ಆವಿಷ್ಕರಿಸಲು ಹಾರುವ ತಟ್ಟೆಗಳ ವಿಶ್ಲೇಷಣೆಯು ಒಂದು ಪ್ರಬಲವಾದ ಆಯುಧವಾಗಬಹುದು.

ಈ ಚಿಕ್ಕ ಪುಸ್ತಕದಲ್ಲಿ ಹಾರುವ ತಟ್ಟೆಗಳನ್ನು ಕುರಿತು ಹಂತಹಂತ ವಿವರಣೆಯನ್ನು ಕೊಡಲಾಗಿದೆ. ಇದರ ವಿಶ್ಲೇಷಣೆಯು ಹೊರ ನಾಗರಿಕತೆಯ ಮೇಲೆ ಬೆಳಕು ಚೆಲ್ಲಿರುವ ಗಮನಾರ್ಹವಾದ ವಿಷಯವನ್ನೂ ಇಲ್ಲಿ ವರ್ಣಿಸಲಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆಯ ಆಶ್ರಯದಲ್ಲಿ ನಾನು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ ೨೬-೮-೧೯೭೧ರಂದು ಈ ವಿಷಯವನ್ನು ಕುರಿತು ಉಪನ್ಯಾಸ ನೀಡಿದೆ. ಹೊಳಲ್ಕೆರೆಯ ಗಜಾನನ ಸಂಘದ ಕಾರ್ಯಕರ್ತರ ಆತ್ಮೀಯತೆಯನ್ನು ಇಲ್ಲಿ ನೆನವರಿಸಿಕೊಳ್ಳುತ್ತೇನೆ.

ಈ ಉಪನ್ಯಾಸವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ ಪ್ರಸಾರಾಂಗದ ನಿರ್ದೇಶಕರಿಗೆ ನಾನು ಚಿರಋಣಿ.

ಅಂದವಾಗಿ ಮುದ್ರಿತವಾದ ಈ ಚಿಕ್ಕ ಪುಸ್ತಕವು ಓದುಗರ ಒಲವನ್ನು ಪಡೆದೀತೆಂದು ಹಾರೈಸುವೆನು.

ಉಡುಪಿ
೨೩-೭-೭೩

**ಕೆ. ಹರಿದಾಸ ಭಟ್**

# ಹಾರುವ ತಟ್ಟೆಗಳು

ಭೂಮಿಯ ನಾಗರಿಕತೆಯು ಬೆಳವಣಿಗೆಯು ವಸ್ತು ಮತ್ತು ಶಕ್ತಿಗಳನ್ನು ಮಾನವನ ಆವಶ್ಯಕತೆಗೆ ತಕ್ಕಂತೆ ಅಧಿಕ ಪ್ರಮಾಣದಲ್ಲಿ ಅಳವಡಿಸಿಕೊಳ್ಳುವ ದಿಶೆಯಲ್ಲಿ ಮುಂದುವರಿಯುತ್ತಿರುವುದು. ಇಂತಹ ತಾಂತ್ರಿಕ ಬೆಳವಣಿಗೆಯು ನಿರಂತರವಾಗಿ ಸಾಗುತ್ತಲೇ ಇದೆ. ಇದರಿಂದಾಗಿ ಮಾನವನು ನಿಸ್ಸಂಶಯವಾಗಿ ತನ್ನ ತಾಂತ್ರಿಕ ಚಟುವಟಿಕೆಯನ್ನು ಸೌರವ್ಯೂಹಕ್ಕೆ ಮಾತ್ರ ಸೀಮಿತಗೊಳಿಸದೆ, ಗ್ಯಾಲಕ್ಸಿಯ ಬಹು ಭಾಗಕ್ಕೂ ಸ್ವಲ್ಪವೇ ಸಮಯದಲ್ಲಿ (ಅಂದರೆ ಹಲವು ಕೋಟಿ ವರ್ಷಗಳಲ್ಲಿ!) ವಿಸ್ತರಿಸುವನು. ಗ್ಯಾಲಕ್ಸಿಯಲ್ಲಿ ಅಸ್ತಿತ್ವದಲ್ಲಿರುವುದು ನಮ್ಮದೊಂದೇ ನಾಗರಿಕತೆ ಎಂದು ನಂಬಲು ಯಾವ ಕಾರಣವೂ ಇಲ್ಲ. ಬಾಹ್ಯಾಕಾಶದಲ್ಲಿರಬಹುದಾದ ಹಲವು ಜನಾಂಗಗಳ ನಾಗರಿಕತೆಯು ನಮ್ಮ ನಾಗರಿಕತೆಗಿಂತ ಸುಮಾರು ಸಾವಿರ ಮಿಲಿಯಗಟ್ಟಲೆ ವರ್ಷ ಮುಂದಿರುವ ಸಾಧ್ಯತೆ ಇದೆ. ಹಾಗೂ ತಾಂತ್ರಿಕ ಪರಿಜ್ಞಾನವು ನಾಗರಿಕತೆಯ ಅಳತೆಗೋಲು ಎಂದು ಪರಿಗಣಿಸದಲ್ಲಿ ಬಾಹ್ಯಾಕಾಶವು ಅದೇಕೆ ಇಷ್ಟರತನಕ ನಮ್ಮೊಂದಿಗೆ ಸ್ಪರ್ಧಿಸದಿರುವುದು ? ಬಾಹ್ಯಾಕಾಶದ ಬುದ್ಧಿಜೀವಿಗಳ ಚಟುವಟಿಕೆಯು ಅದೇಕೆ ಬೃಹತ್ ಪ್ರಮಾಣದಲ್ಲಿ ಕಾಣಿಸದು? ಅಂತರಿಕ್ಷದಿಂದ ಅತಿಥಿಗಳು ಭೂಮಿಯನ್ನು ಈ ತನಕ ಅದೇಕೆ ಸಂದರ್ಶಿಸಲಿಲ್ಲ? ಮಾನವಕುಲವು ಇಷ್ಟರತನಕ ಬಾಹ್ಯ ಬುದ್ಧಿಜೀವಿಗಳೊಂದಿಗೆ ಸಂಪರ್ಕ ಸಾಧಿಸದಿರಲು ಕಾರಣವೇನು ? ಬಾಹ್ಯಾಕಾಶ ನಾಗರಿಕತೆಯ ಸಂಪರ್ಕ ಸಾಧನಗಳ ಕುರುಹು ನಮಗೆ ದೊರತಿದೆಯೇ? ಇದನ್ನು ಈಗ ಪರಿಶೀಲಿಸುವ.

ಅನೇಕ ಗುರುತಿಸಲಾರದಂತಹ ಹಾರುವ ವಸ್ತುಗಳು (Unidentified Flying objects) ಆಗಾಗ್ಗೆ ಪ್ರಪಂಚದೆಲ್ಲೆಡೆ
ಗಳಲ್ಲೂ ಕಾಣಿಸಿರುವುದನ್ನು ಪತ್ರಿಕೆಗಳು ಉಲ್ಲೇಖಿಸಿವೆ. ಬೇರೆ
ಬೇರೆ ಜನಾಂಗಗಳು ಬೇರೆ ಬೇರೆ ಕಾಲಗಳಲ್ಲಿ ತಟ್ಟೆಯಾಕಾರದ
ವಸ್ತುಗಳನ್ನು ವೀಕ್ಷಿಸಿದುದಕ್ಕೆ ಆಧಾರವಿದೆ. ೧೯೬೬ರಲ್ಲಿ ಇವು
ಆಸ್ಟ್ರೇಲಿಯಾದಿಂದ ಅಮೆರಿಕಾದ ಮಿಶಿಗನ್ ತನಕದ ಪ್ರದೇಶ
ದುದ್ದಕ್ಕೂ ಹಾರುತ್ತಿದ್ದು, ಆಗಾಗ್ಗೆ ಜವಾಬ್ದಾರಿ ಜನರ ದೃಷ್ಟಿಗೆ
ಬಿದ್ದಿವೆ. ಹಾರುವ ತಟ್ಟೆಗಳನ್ನು ಮೊತ್ತಮೊದಲಿಗೆ ಟರ್ಕಿಯಲ್ಲಿ
೧೮೮೫ರಲ್ಲಿ ಪತ್ತೆಹಚ್ಚಲಾಯಿತು. ಬಳಿಕ ೧೮೮೭ರಲ್ಲಿ ನೋವಾ
ಸ್ಕೋಟಿಯಾದಲ್ಲಿಯೂ ಕಂಡುಬಂದವು. ೧೮೯೭ರಲ್ಲಿ ಇಂತಹ
ನೂರಾರು ವಸ್ತುಗಳ ಗಗನ ಚಟುವಟಿಕೆಗಳನ್ನು ಅಮೆರಿಕಾದಲ್ಲಿ
ವೀಕ್ಷಿಸಲಾಯಿತು. ೧೯೭೧ ಜೂನ್‌ನಲ್ಲಿ ಸಿಲೋನಿನಲ್ಲಿಯೂ
ಹಾರುವ ತಟ್ಟೆಯು ಕಾಣಿಸಿತು.

೧೯೩೬ರಿಂದ ೧೯೪೬ರ ತನಕ ಹಾರುವ ತಟ್ಟೆಗಳು ಎಲ್ಲಿಯೂ
ಕಂಡುಬರಲಿಲ್ಲ. ಪ್ರಥಮ ಮಹಾಯುದ್ಧದ ಸಮಯದಲ್ಲಿ ತಾಸಿಗೆ
೧೦೦ ಮೈಲುಗಳಿಗಿಂತಲೂ ಅಧಿಕವೇಗದಲ್ಲಿ ಚಲಿಸುವ ವಿಮಾನಗಳ
ರಚನೆಯಾದುದೇ ಬಾಹ್ಯಪ್ರಪಂಚದ ಹಾರುವ ತಟ್ಟೆಗಳು ಈ ಅವಧಿ
ಯಲ್ಲಿ ಕಾಣದಿರಲು ಕಾರಣವಾಗಿರಬಹುದೇ? ೧೯೪೬ರ ವಸಂತ
ಮಾಸದಲ್ಲಿ ಸ್ಕೇಂಡಿನೇವಿಯ ಮತ್ತು ರಷ್ಯಾದ ಹಲವು ಭಾಗಗಳಲ್ಲಿ
ರಾತ್ರಿಯ ಹೊತ್ತು ಇವು ಪುನಃ ಕಾಣಿಸಹತ್ತಿದವು. ಮಾನವ
ನಿರ್ಮಿತ ಆಕಾಶ ನೌಕೆಗಳಿಗೆ ಸಾಧ್ಯವಾಗದ ರೀತಿಯಲ್ಲಿ ಈ ಪ್ರಕಾಶ
ಮಾನ ವಸ್ತುಗಳು ಆಕಾಶದಲ್ಲಿ ಕುಪ್ಪಳಿಸುತ್ತಾ, ಮೇಲೆ ಕೆಳ
ಹಾರುತ್ತ ಪಥವನ್ನು ಹಾಗೂ ವೇಗವನ್ನೂ ಕ್ಷಣಕ್ಷಣಕ್ಕೆ ಶೀಘ್ರ
ವಾಗಿ ಬದಲಿಸುತ್ತಾ ಆಗಾಗ್ಗೆ ಗುಂಪನ್ನು ಬದಲಿಸಿ, ಸದ್ದಿಲ್ಲದ

ಹಾರಾಟವನ್ನು ನಡೆಸುವುವು. ಮೊದಲಿಗೆ ಇವು "ರೋಕೆಟ್" ಇರಬಹುದೆಂದು ಊಹಿಸಲಾಯಿತು. ಆದರೆ ಹೊಗೆಯ ಬಾಲ ಕಾಣಿಸದು. ಒಂದೇ ಅಥವಾ ಗುಂಪುಗಳಾಗಿ ಹಾರುವ ಈ ವಿಶೇಷ ತಟ್ಟೆಗಳ ಹಾರಾಟವು ಮಾನವರಿಗೆ ಈ ತನಕ ತಿಳಿದಿರುವ ಯಾವ ವೈಮಾನಿಕ ಹಾರಾಟಕ್ಕಿಂತಲೂ ವಿಭಿನ್ನವಾಗಿರುವುದು.

ಅತಿ ಹಿಂದೆ ಕಂಡುಬರುತ್ತಿದ್ದ ಹಾರುವ ವಸ್ತುಗಳು ಬಿಲ್ಲೆಯಂತೆಯೂ, ತಟ್ಟೆಯಂತೆಯೂ, ರಾಕೆಟ್‌ನಂತೆಯೂ ಅಥವಾ ಸಿಗರೇಟಿನ ಆಕಾರದಲ್ಲೂ ಇದ್ದು, ಬೆಳಕನ್ನು ಸೂಸುತ್ತಿರಲಿಲ್ಲ. ೧೯೫೪ರ ಬಳಿಕ ಕಂಡುಬಂದ ಹಾರುವ ವಸ್ತುಗಳು ನೀಲಿ, ಹಸುರು ಬೆಳಕನ್ನು ಹೊರಸೂಸುವಂತಹವು. ಈ ರೀತಿಯಲ್ಲಿ ಹಾರುವ ತಟ್ಟೆಗಳಲ್ಲಾದ ವಿನ್ಯಾಸ ಬದಲಾವಣೆಯು ಬಹುಶಃ ಮಾನವ ನಿರ್ಮಿತ ವಿಮಾನಗಳೊಂದಿಗೆ ಡಿಕ್ಕಿಯಾಗುವುದನ್ನು ತಡೆಯುವುದೇ ಆಗಿರಬೇಕಲ್ಲವೇ?

ಕೆಲವು ಮಾನವರಿಗೂ, ಹಂದಿ ಕುದುರೆಗಳಂತಹ ಪ್ರಾಣಿಗಳಿಗೂ ಹಾರುವ ತಟ್ಟೆಗಳ ಆಗಮನವನ್ನು ಗ್ರಹಿಸುವುದು ಸಾಧ್ಯವಾಗಿದೆ. ಹಾರುವ ತಟ್ಟೆಗಳು ಉತ್ಪತ್ತಿಸುವ ವಿದ್ಯುತ್ಕಾಂತೀಯ ಅಲೆಗಳು ನೇರವಾಗಿ ನರವ್ಯೂಹವನ್ನು ಚಕಿತಗೊಳಿಸುವುದೇ ಇದಕ್ಕೆ ಕಾರಣ ವಿರಬಹುದು.

ಪ್ರಪಂಚದ ಬೇರೆ ಬೇರೆ ಕಡೆಗಳಲ್ಲಿ ಕಂಡುಬಂದ ಈ ತಟ್ಟೆಗಳ ದೃಶ್ಯವನ್ನು ವೀಕ್ಷಕರು ಹೇಗೆ ವಿವರಿಸಿದ್ದಾರೆ ಎಂಬುದನ್ನು ಸ್ವಲ್ಪ ಪರೀಕ್ಷಿಸೋಣ.

ಆಸ್ಟ್ರೇಲಿಯಾದ ಪರ್ತ್‌ಪರ್ವತ ಪ್ರದೇಶದಲ್ಲಿ ಬೆನೆಡಿಕ್ ಎಂಬಾತ ರಾತ್ರಿಯ ವಿದ್ಯುತ್ ದೀಪಗಳ ದೃಶ್ಯದ ಛಾಯಾ ಚಿತ್ರ ತೆಗೆದು ಕೊಳ್ಳುತ್ತಿದ್ದಾಗ ಫಕ್ಕನೆ ಮೇಲಿನಿಂದ ಒಂದು ಬೆಳಕು ಇಳಿದು

ಬರುವುದನ್ನು ಕಂಡನು. ಅದು ಹಸುರು ಬಣ್ಣದಿಂದ ಕಂಗೊಳಿಸು ತ್ತಿದ್ದು, ಅದೇ ಬಣ್ಣದ ಬಾಲವನ್ನೂ ಹೊಂದಿತ್ತು. ಆತನು ಎರಡು ಮೂರು ಫೋಟೋ ತೆಗದುಕೊಳ್ಳುವಷ್ಟರಲ್ಲೇ ಅದು ಅಧಿಕ ವೇಗದಲ್ಲಿ ಆಕಾಶಕ್ಕೆ ಧುಮುಕಿ ಅದೃಶ್ಯವಾಯಿತು.

ಅಮೆರಿಕಾದಲ್ಲೂ ಇಂತಹ ಅನುಭವಗಳನ್ನೇ ಅನೇಕರು ಪಡೆದರು. ಮಾರ್ಕ್ ರೊತ್ ಎಂಬ ನ್ಯೂಯಾರ್ಕ್ ತರುಣನು ರಾತ್ರಿಯ ವೇಳೆ ಉದ್ಯಾನದಲ್ಲಿ ತಿರುಗುತ್ತಿದ್ದಾಗ, ಒಮ್ಮಿಂದೊಮ್ಮೆಗೇ ಆಕಾಶ ದಲ್ಲಿ ಕಿತ್ತಳೆ ಬಣ್ಣದ ವಸ್ತುವು ಹಳದಿ ಜ್ಯೋತಿಯನ್ನು ಹೊರ ಹೊಮ್ಮುತ್ತಾ ಮುಂದುವರಿಯುತ್ತಿರುವುದನ್ನು ಕಂಡನು. ಅದರ ಫೋಟೋ ತೆಗೆದುಕೊಳ್ಳುತ್ತಿರುವಾಗಲೇ ಅದು ಮಾಯವಾಯಿತು.

ಅಲೆನ್ ಸ್ಮಿತ್ ಎಂಬ ೧೪ ವರ್ಷದ ಪತ್ರಿಕಾ ವ್ಯಾಪಾರಿ ನಿರ್ದಿಷ್ಟ ವಾಗಿ ಗುರುತಿಸಲಾರದ ಒಂದು ವಸ್ತುವನ್ನು ಆಕಾಶದಲ್ಲಿ ಕಂಡು ಅದರ ಫೋಟೋ ತೆಗೆದನು. ಅವನ ಅನುಭವದಂತೆ ಅದು ಬಿಳಿ ಯಿದ್ದು, ಬಳಿಕ ಕೆಂಪು, ನೀಲಿ, ಹಸಿರು ಬಣ್ಣಗಳಿಗೆ ಬದಲಾಯಿತು. ಅದರಿಂದ ಕರ್ಕಶ ಸದ್ದು ಕೇಳಿಬರುತ್ತಿದ್ದು, ಸದ್ದಿನೊಂದಿಗೆ ಬೆಳಕಿನ ತೀವ್ರತೆಯೂ ಹೆಚ್ಚುತ್ತಿತ್ತು.

ಇವೆಲ್ಲಕ್ಕಿಂತಲೂ ಹೆಚ್ಚಿನ ಆಶ್ಚರ್ಯದ ಘಟನೆಯು ಮಿಶಿಗನ್ನಿನ ಅನ್ ಆರ್ಬರ್‌ನಲ್ಲಿ ನಡೆಯಿತು. ಫ್ರೇಂಕ್‌ಮನ್ನರ್ ತನ್ನ ಮಗ ರೋನಿಯೊಂದಿಗೆ ರಾತ್ರಿ ಬೇಟೆಗೆ ಹೊರಟಿದ್ದನು. ಮನೆಯಿಂದ ಕೊಂಚ ದೂರ ಸಾಗಿದಾಗ, ಹತ್ತಿರದ ಕೊಳಚೆ ಪ್ರದೇಶದ ಮೇಲೆ ಬೆಳಕು ಕಂಡರು. ಜಾಗ್ರತೆಯಲ್ಲಿ ಹತ್ತಿರದ ಒಂದು ಮರವನ್ನು ಹತ್ತಿ ಅದೇ ದಿಕ್ಕನ್ನೇ ನೋಡುತ್ತಾ ಕುಳಿತರು. ಹಾರುತ್ತಿರುವ ವಸ್ತುವು ಒಂದು ವಾಹನದಂತೆ ಕಾಣುತ್ತಿತ್ತು. ಅದರ ಇದುರಲ್ಲಿ ಬಿಳಿದೀಪವೂ ಹಿಂಬದಿಯಲ್ಲಿ ಹಳದಿ ದೀಪವೂ ಇದ್ದಿತ್ತು. ವಾಹನದ

ಮೂಡು ಇಬ್ಬದಿಯಲ್ಲೂ ಇಳಿಜಾರಾಗಿದ್ದು ಕಲ್ಲಿನಂತಹ ದೊರಗು ವಸ್ತುವಿನಿಂದ ಮಾಡಿದಂತಿತ್ತು. ಅದು ಭೂಮಿಯಿಂದ ಎಂಟು ಅಡಿ ಎತ್ತರದಲ್ಲಿ ಮಂಜಿನ ಮೇಲೆಯೇ ಲಂಗರು ಹಾಕಿತ್ತು. ಅವರು ನೋಡುತ್ತಿದ್ದಂತೆಯೇ ಅದು ಒಮ್ಮೆಲೇ ಕೆಂಪು ದೀಪವನ್ನು ಹೊರ ಸೂಸಿತು. ಬಳಿಕ ಅದರ ದೀಪಗಳು ಆರಿದವು. ತಂದೆ ಮತ್ತು ಮಗ ಎಷ್ಟು ಪ್ರಯತ್ನಿಸಿದರೂ ಮತ್ತೆ ಅದು ಅಂದು ಕಾಣಿಸಲಿಲ್ಲ. ವಿಷಯವನ್ನು ಕೂಲಂಕಷವಾಗಿ ಸರಕಾರಿ ಅಧಿಕಾರಿಗಳಿಗೆ ತಿಳಿಸ ಲಾಯಿತು. ಮುಂದಿನ ದಿನಗಳಲ್ಲಿ ಅದೇ ಜಾಗದಲ್ಲಿ ಹಾರುವ ತಟ್ಟೆಗಳು ಬಂದು ಇಳಿಯುವ ದೃಶ್ಯವನ್ನು ಅನೇಕ ಸರಕಾರಿ ಅಧಿಕಾರಿ ಗಳು ವೀಕ್ಷಿಸಿದರು. ನೌಕಾದಳದ ಖಗೋಳ ವಿಜ್ಞಾನಿ ಎಲೆನ್ ಹಿಲೆಕ್ ಕೂಡ ಈ ಬಗ್ಗೆ ಸಾಕ್ಷಿನೀಡುತ್ತಾ, ಅಂತರಿಕ್ಷದ ಚಟುವಟಿಕೆಗೆ ಹಾರುವ ತಟ್ಟೆಗಳು ಸಂಕೇತವಾಗಿರಬಹುದೆಂಬ ಅಂಶವನ್ನು ಅಲ್ಲಗಳೆ ಯುವುದು ಕಷ್ಟ ಎಂದಿರುವನು.

೧೯೫೬ರಲ್ಲಿ ೪ ಹುಡುಗರು ಬ್ಲೂಮಿಂಗ್‌ಟನ್ ಇಂಡಿಯಾನಾ ದಲ್ಲಿ ಬಿಡಾರ ಹೂಡಿದ್ದರು. ಅವರು ರಾತ್ರಿ ೩ ಘಂಟೆ ಹೊತ್ತಿಗೆ ಉಚ್ಚಸ್ವರ ಮತ್ತು ಶುಭ್ರ ಬೆಳಕಿನಿಂದಾಗಿ ಎಚ್ಚರಗೊಂಡಾಗ ಒಂದು ವರ್ತುಲಾಕಾರದ ವಸ್ತುವು ಆಕಾಶದಲ್ಲಿರುವುದನ್ನು ಕಂಡರು. ಈ ಬೆಳಕು ಎಷ್ಟು ತೀವ್ರವಾಗಿತ್ತೆಂದರೆ ಇದರಿಂದಾಗಿ ಅವರ ದೇಹ ಬಿಸಿಯೇರಿತು. ಬಳಿಕ ಅದು ಝೇಂಕಾರವನ್ನುಂಟುಮಾಡುತ್ತಾ ಅದೃಶ್ಯವಾಯಿತು.

೧೯೬೫ರ ಆಗಸ್ಟ್ ತಿಂಗಳಲ್ಲಿ ನಡೆದ ಘಟನೆ ಇದು: ಹಿಮಾ ಚ್ಛಾದಿತ ಕೊಳದ ಮೇಲಿನಿಂದ ಸ್ಥಳದಿಂದ ಸ್ಥಳಕ್ಕೆ ಹಾರುತ್ತಿದ್ದ ಪ್ರಕಾಶಮಾನವಾದ ಕೋಳಿಮೊಟ್ಟೆಯಾಕಾರದ ವಸ್ತುವನ್ನು ಅನೇಕರು ವೀಕ್ಷಿಸಿದರು. ಕಾವಲುಗಾರರು ಬಳಿಕ ಕೊಳದ ಹಿಮ

ಗಟ್ಟದ ಮೇಲ್ಮೈಯಲ್ಲಿ ಆ ವಸ್ತುವು ತಂಗಿದ ಸ್ಥಳದಲ್ಲಾದ ಹೊಂಡ ವನ್ನು ಪತ್ತೆಹಚ್ಚಿದರು. ಹಾಗೂ ಏಳು ಗುರುತಿಸಲಾರದ ಹಾರುವ ವಸ್ತುಗಳನ್ನು ಜೆಟ್ ವಿಚ್ಛೇದಕಾರಿಗಳು ಬೆನ್ನಟ್ಟುತ್ತಿದ್ದ ಆ ದೃಶ್ಯ ವನ್ನು ಸಾವಿರಾರು ಪ್ರೇಕ್ಷಕರು ಮಿನಿಸೋಟಾದ ಡುಲುತ್ ಬೀದಿ ಯಲ್ಲಿ ನಿಂತು ಕಂಡರು. ಪೆನೆನ್ಸೂಲಾದ ರೇಡಾರ್ ಉಪಕರಣವು ಜೆಟ್ ವಿಮಾನಗಳನ್ನು ಗುರುತಿಸಲಾರದ ವಸ್ತುಗಳನ್ನೂ ಅಂದು ಪತ್ತೆಹಚ್ಚಿತು.

ಕ್ಯಾಲಿಫೋರ್ನಿಯಾದ ರಿಯೋವಿಸ್ಟಾ ಹಳ್ಳಿಯಲ್ಲಿ ೧೯೬೪ರ ಮೇಯಲ್ಲಿ ಆಗಾಗ್ಗೆ ಹಾರುವ ತಟ್ಟೆಗಳು ಕಂಡುಬಂದುವು. ಅಲ್ಲಿಯ ವೀಕ್ಷಕರ ಅಭಿಪ್ರಾಯದಂತೆ ಅವು "ಟೋರ್ಪೆಡೋ"ವಿನಂತಿದ್ದು ೫ ಅಡಿ ವ್ಯಾಸ ಮತ್ತು ೧೫ ಅಡಿ ಉದ್ದವಾಗಿದ್ದುವು ಮತ್ತು ಕೆಂಪು ಬೆಳಕನ್ನು ಸೂಸುತ್ತಾ ಸದ್ದಿಲ್ಲದೆ ಚಲಿಸುತ್ತಿದ್ದುವು.

ಮೇಲಿನ ವಿವರಣೆಗಳು ಸಾಮಾನ್ಯ ಜನರ ವೀಕ್ಷಣೆಗಳದ್ದಾಗಿದೆ. ಈಗ ಜವಾಬ್ದಾರಿಯುತ ಅಧಿಕಾರಿಗಳ ಅನುಭವಗಳನ್ನು ಪರಿಶೀಲಿ ಸೋಣ.

ವೀಕ್ಷಕರ ಮಾತನ್ನು ಪರಿಶೀಲಿಸಲು ಫೇರ್‌ಫೀಲ್ಡಿನ ಡೆಪ್ಯೂಟಿ ಶೆರಿಫ್ ಜೋನ್ ಕ್ರಜ್ ನಗರದಿಂದ ೫ ಮೈಲು ದೂರದ ಗೋಪುರದ ಬಳಿ ನಡೆದನು. ನಸು ಕೆಂಪು ಬೆಳಕನ್ನು ಹೊಮ್ಮುತ್ತಿದ್ದ ಸಿಗರೇಟಿ ನಾಕಾರದ ಆ ವಿಚಿತ್ರ ವಸ್ತುವು ಕೇವಲ ನೂರು ಅಡಿ ಎತ್ತರದಲ್ಲಿ ಚಲಿಸುತ್ತಿತ್ತು. ಆತನು ಕರೆದು ತಂದ ಸೈನಿಕರು ಅದಕ್ಕೆ ಗುರಿ ಯಿಟ್ಟು ಪಿಸ್ತೂಲಿನಿಂದ ಹೊಡೆದಾಗ ಲೋಹದ ಶಬ್ದ ಕೇಳಿಸಿತು, ಮತ್ತು ಕ್ಷಣಮಾತ್ರಕ್ಕೆ ಅದು ಅತ್ಯಧಿಕವಾಗಿ ಕೆಂಪುಗೊಂಡು ಮಾಯವಾಯಿತು.

ಮೆಕ್ಸಿಕೋದ ವೀಕ್ಷಣಾಲಯದಲ್ಲಿ ೧೮೮೩ರಲ್ಲಿ ಪ್ರೊ. ಬೋನೀಲಾರು ಇಂತಹ ವಸ್ತುಗಳ ಛಾಯಾಚಿತ್ರಗಳನ್ನು ತೆಗೆದರು. ಎರಡು ತಾಸು ಅವಧಿಯಲ್ಲಿ ಅವರು ೨೮೩ ಅಂತಹ ವಸ್ತುಗಳನ್ನು ನೋಡಿದರು.

೧೯೫೩ರ ಜನವರಿ ೨೯ರಂದು ದಕ್ಷಿಣ ಕೆರೋಲೀನಾದ ಕೋನ್‌ವೇಯಲ್ಲಿ ಮಾಜಿ ಇಂಟೆಲಿಜೆನ್ಸ್ ಅಧಿಕಾರಿ ರಾತ್ರಿ ೧ ಗಂಟೆಗೆ ಮನೆಗೆ ಹಿಂತೆರಳಿದಾಗ ದೊಡ್ಡಿಯಲ್ಲಿದ್ದ ಹಂದಿಗಳು ಕಿರುಚಿಕೊಳ್ಳುವುದನ್ನೂ ಕುದುರೆಗಳು ಗೊರಸನ್ನು ನೆಲಕ್ಕೆ ಬಡಿಯುವ ಶಬ್ದವನ್ನೂ ಅಲಿಸಿದನು. ಅಷ್ಟರಲ್ಲೇ ದೃಷ್ಟಿಯನ್ನು ಮರಗಳ ಮೇಲೆ ಬೀಳಿಸಿದಾಗ, ಅಲ್ಲಿ ಹಾರುತ್ತಿರುವ ಅಪರಿಚಿತ ವಸ್ತುವು ಕಂಡುಬಂದಿತು. ಪಿಸ್ತೂಲಿನಿಂದ ಹೊಡೆದಾಗ ಅದು ಕಣ್ಮರೆಯಾಯಿತು.

೧೯೬೫ರಲ್ಲಿ ಆಸ್ಟ್ರೇಲಿಯಾದ ರಿಟ್ರೀಟ್ ಹೊಟೇಲಿನ ಬಳಿ ಮಿಲಿಟರಿ ಪೈಲೆಟ್ ಟೆಲ್ಸೆ ಮತ್ತು ಇಂಜಿನಿಯರ್ ಜುಡಿನ್ ಒಂದು ಅಪರಿಚಿತ ಆಕಾಶ ನೌಕೆಯು ಸಮೀಪಿಸುತ್ತಿರುವುನ್ನು ಕಂಡರು. ಅದರ ವರ್ತುಲಾಕಾರದ ಬುಡದಲ್ಲಿ ಅನೇಕ ಕಿಟಕಿಗಳು ಕಂಡುಬಂದವು. ಮೂರು ಕಾಲುಗಳುಳ್ಳ ಆ ನೌಕೆಯು ಅರ್ಧ ತಾಸಿನ ವರೆಗೆ ನಿಶ್ಚಲವಾಗಿದ್ದು ಬಳಿಕ ವೇಗೋತ್ಕರ್ಷಕೊಂಡು ೩೦೦ ಅಡಿ ಎತ್ತರದಲ್ಲಿ ಚಲಿಸುತ್ತಾ ಅದೃಶ್ಯವಾಯಿತು.

ಸೆಪ್ಟೆಂಬರ್ ೧೯೬೫ರಲ್ಲಿ ಎಕ್ಸೆಟಾರ್‌ನ ಪೋಲೀಸ್ ಠಾಣೆಗೆ ಮೂರು ವರದಿಗಳು ಬಂದವು. ಅವನ್ನು ಪರಿಶೀಲಿಸಲು ಆಫೀಸರ್ ಬರ್ಟ್ರಂಡ್ ಧಾವಿಸಿದ್ದನು. ಮೊದಲನೆಯ ವರದಿಯು ಕಾರೊಂದರಲ್ಲಿ ಚಲಿಸುತ್ತಿದ್ದ ಇಬ್ಬರು ಮಹಿಳೆಯರದ್ದು. ಅವರ ಕಾರನ್ನು ಹಾರುವ ತಟ್ಟೆಯು ಹಿಂಬಾಲಿಸುತ್ತಾ ಬಂದು ಕಡೆಗೆ ಅದೃಶ್ಯವಾಯಿತು. ೧೮ ವರ್ಷ ಪ್ರಾಯದ ನೋರ್ಮನ್ ಮನೆಗೆ

ಹಿಂತಿರುಗುತ್ತಿದ್ದಾಗ ಕೆಂಪು ಬೆಳಕಿನ ಹಾರುವ ತಟ್ಟೆಯು ಅವನನ್ನು ಓಡಿಸುತ್ತಾ ಬಂದಿತು. ಅದರ ಕ್ಷಣದೀಪದ ಆವರ್ತವು ೧-೨-೩-೪-೫-೪-೩-೨-೧ ಅನುಕ್ರಮದಲ್ಲಿತ್ತು. ಮೂರನೇ ವರದಿಯನ್ನು ಪರಿಶೀಲಿಸಲು ಹೋದಾಗ ಕೆಂಪು ಬೆಳಕುಳ್ಳ ಕಪ್ಪು ಬಣ್ಣದ ಚಲಿಸುವ ವಸ್ತುವನ್ನು ಕಂಡನು. ಅದು ಕೇವಲ ೭೦ ಅಡಿ ಎತ್ತರದಲ್ಲಿ ಹಾರುತ್ತಿತ್ತು. ಇದನ್ನು ಕಂಡು ಭಯಗೊಂಡ ಬರ್ಟಂಡನು ಠಾಣೆಗೆ ಸಹಾಯಕ್ಕಾಗಿ ರೇಡಿಯೋ ಸಂಪರ್ಕ ಬೆಳಿಸಿದ. ಸ್ಥಳಕ್ಕೆ ಧಾವಿಸಿದ ಸೂಪರಿಂಟೆಂಡೆಂಟ್ ಹಂಟನಿಗೂ ಈ ಅಪೂರ್ವ ದೃಶ್ಯವನ್ನು ಕಾಣುವ ಭಾಗ್ಯಲಭಿಸಿತು.

ಹಾರುವ ತಟ್ಟೆಗಳು ಇಷ್ಟು ಸಂಖ್ಯೆಗಳಲ್ಲಿ ಕಂಡುಬಂದರೂ ಅವುಗಳ ನಿಯೋಜಿತ ಉದ್ದೇಶವೇನಿರಬಹುದು_ಇದನ್ನೂ ತಿಳಿಯುವುದು ಅವಶ್ಯವಾಗಿದೆ. ಅನೇಕ ಬಾರಿ ಅವು ಮಾನವನ ಯಾಂತ್ರಿಕ ಮತ್ತು ವೈಜ್ಞಾನಿಕ ಪ್ರಗತಿಯೊಂದಿಗೆ ಸ್ಪರ್ಧಿಸಿರುವುದು ಕಂಡು ಬಂದಿದೆ.

೧೯೬೧ರಲ್ಲಿ ರಷ್ಯಾ ಹಾರಿಸಿಬಿಟ್ಟ ಬಾಹ್ಯಾಕಾಶ ನೌಕೆಯು ಭೂಮಿಗೆ ಕಕ್ಷೆಯಲ್ಲಿ ಸುತ್ತುತ್ತಿದ್ದು ಯಾಂತ್ರಿಕ ತೊಂದರೆಗಳಿಂದ ಅಲ್ಲೇಯಿರುವಂತಾಯಿತು. ನೌಕೆಯೊಳಗಿನ ಖೇಚರರು ಮಾತನಾಡುವುದನ್ನು ಟ್ಯೂರಿನ್‌ನಲ್ಲಿ ರೇಡಿಯೋದಲ್ಲಿ ಗ್ರಹಿಸಲಾಯಿತು. ಅದೇನೋ ವಿಚಿತ್ರ ವಸ್ತುವನ್ನು ಕಂಡು ಅವರು ಭಯವಿಹ್ವಲಗೊಂಡಿರುವುದು ಅವರ ಮಾತಿನಿಂದ ವ್ಯಕ್ತವಾಗುತ್ತಿತ್ತು.

೧೯೬೧ರಲ್ಲಿ ಫ್ಲೋರಿಡಾದಿಂದ ಉಡಾಯಿಸಿದ ಪೋಲಾರಿಸ್ ಮಿಸ್ಸೈಲ್‌ನ ಪಥವನ್ನು ರೇಡಾರ್ ಗಮನಿಸುತ್ತಿತ್ತು. ಅಷ್ಟರಲ್ಲಿ ಯಾವುದೋ ಒಂದು ದೊಡ್ಡ ಗುರುತಿಸಲಾರದ ವಸ್ತುವು ಅದಕ್ಕೆ

ಅಡ್ಡಬಂದು ಕೆಲವು ನಿಮಿಷಗಳ ತನಕ ಪೋಲಾರಿಸ್ ಕಾಣದಂತೆ ಮಾಡಿತು.

ಹಾರುವ ತಟ್ಟೆಗಳು ಅಧಿಕ ಸಂಖ್ಯೆಯಲ್ಲಿ ಧ್ರುವ ಪ್ರದೇಶಗಳನ್ನು ಪ್ರವೇಶಿಸುದುದಕ್ಕೆ ಸಾಕ್ಷಗಳಿವೆ. ಅವು ಬಹುಶಃ ಭೂಮಧ್ಯ ರೇಖೆಯ ಮೇಲಿರುವ ಹಾನಿಕಾರಿ ವೇನ್ ಎಲೆನ್ ಬೆಲ್ಟನ್ನು ಪ್ರವೇಶಿಸುವ ಯತ್ನ ಮಾಡಿದಂತಿಲ್ಲ. ಆದುದರಿಂದಲೇ ಈ ಪ್ರದೇಶಗಳಲ್ಲಿ ಅವು ಅಪರೂಪವಾಗಿ ಕಂಡುಬಂದುದು ಇರಬಹುದು.

ಅಮೇರಿಕಾದ ಪ್ರಥಮ ರಾಕೆಟ್ ಹಾರಿಸುವಿಕೆಯಿಂದ (೧೯೪೯) ಹಿಡಿದು ಉಪಗ್ರಹ ಹಾರಿಸುವವರೆಗಿನ (೧೯೫೭) ಕಾಲಾವಧಿಯಲ್ಲಿ ಕಂಡು ಬಂದ ಹಾರುವ ತಟ್ಟೆಗಳು ಬಿಲ್ಲೆಯಾಕಾರದವು ಆಗಿದ್ದು ಹಡಗು, ವಿಮಾನ, ಔದ್ಯೋಗಿಕ ಪ್ರದೇಶ, ಮಿಲಿಟರಿ ಠಾಣ್ಯ ಮುಂತಾದುವುಗಳ ಮೇಲೆ ಎರಗುತಿದ್ದವು.

ನವೆಂಬರ್ ೧೯೫೭ರಲ್ಲಿ ರಶ್ಯನರು ಸ್ಪುಟ್ನಿಕ್-೨ ರಲ್ಲಿ ನಾಯಿಯನ್ನಿಟ್ಟು ಹಾರಿಸಿದರು. ಈ ಘಟನೆಯ ಸಮಯದಲ್ಲೆ ಟೆಕ್ಸಾಸ್‌ನಲ್ಲಿ ಕೆಂಪು ಬೆಳಕಿನ ಒಂದು ವಾಹನವು ಇಳಿಯಿತು. ಇದರ ಹಿಂದೆಯೇ ಹಾರುವ ತಟ್ಟೆಗಳ ಗುಂಪೇ ಇತ್ತು. ತಮ್ಮ ಅಸ್ತಿತ್ವವನ್ನು ಪ್ರಪಂಚಕ್ಕೆ ತೋರಿಸುವುದೇ ಇದಕ್ಕೆ ಕಾರಣವಿರಬಹುದು. ಸ್ಪುಟ್ನಿಕ್-೩ರ ಪಥದ ಛಾಯಾಚಿತ್ರವನ್ನು ಡಾಕ್ಟರ್ ಕೊರಾಲಿಸ್ ತೆಗೆದರು. ಅದರಲ್ಲಿ ಉಪಗ್ರಹದ ಪಥವಲ್ಲದೆ ಅದರ ಸುತ್ತು ಇನ್ನೊಂದು ಪಥವು ಕಂಡಬಂದಿತು. ಇದು ಹಾರುವ ತಟ್ಟೆಯದೇ ಆಗಿದ್ದು ಉಪಗ್ರಹವನ್ನು ಅದು ಕಕ್ಷೆಯಲ್ಲಿ ಹಿಂಬಾಲಿಸುತ್ತಿತ್ತು ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ!

ಸಾಗರದಲ್ಲಿ ಯಾನಮಾಡುತ್ತಿದ್ದ ಹಡಗುಗಳೂ ಹಾರುವ ತಟ್ಟೆಗಳ ಧಾಳಿಗೊಳಗಾಗಿದ್ದವು. ಈ ತಟ್ಟೆಗಳು ನೌಕೆಯನ್ನು

ಸಮೀಪಿಸಿದಾಗ, ನೌಕೆಯ ಕಾಂತ ಸೂಚಕವು ಅಧಿಕ ವಿಕ್ಷೇಪ ಗೊಂಡು, ಅದು ಕಣ್ಮರೆಯಾಗುತ್ತಲೇ ಮೊದಲ ಸ್ಥಿತಿಗೇ ಬರುವುದು.

೧೯೬೫ರಲ್ಲಿ ಪೆಂಟಾಗನಿನ ಕೋಣೆಯಲ್ಲಿ ಕುಳಿತು ಹೊರ ಆಕಾಶ ವನ್ನು ವೀಕ್ಷಿಸುತ್ತಿದ್ದ ೧೨ ಮಂದಿ ಮಿಲಿಟರಿ ಅಧಿಕಾರಿಗಳಿಗೂ ಕೋಳಿಮೊಟ್ಟೆಯಾಕಾರದ ಇವನ್ನು ಕಾಣುವ ಸಂದರ್ಭ ಕಾದಿತ್ತು. ಇವನ್ನು ಬೆನ್ನಟ್ಟಲು ಡೆಲ್ಟಾವಿಂಗ್ ಜೆಟ್‌ಗಳನ್ನು ಕಳುಹಿಸ ಲಾಯಿತು. ಆದರೆ ಹಾರುವ ತಟ್ಟೆಗಳು ಇವುಗಳಿಗಿಂತಲೂ ವೇಗ ದಿಂದ ಚಲಿಸಿ ಅದೃಶ್ಯವಾದವು.

೧೯೬೫ರಲ್ಲಿ ನ್ಯೂಯಾರ್ಕ್ ಮತ್ತು ನ್ಯೂಇಂಗ್ಲೆಂಡ್‌ಗಳಲ್ಲಿ ಒಮ್ಮೆಲೇ ವಿದ್ಯುಚ್ಛಕ್ತಿ ಸರಬರಾಜು ಕಡಿದು ಹೋಯಿತು. ಇದಕ್ಕೆ ಕಾರಣವೇನಿರಬಹುದು ?

೧೯೪೭ ರಿಂದ ಈಚೆಗೆ ಕಂಡುಬಂದ ಪ್ರತಿ ಹಾರುವ ತಟ್ಟೆಯು ವಾಹನ, ಹಡಗು, ಟ್ರಾಕ್ಟರುಗಳನ್ನು ಸಮೀಪಿಸಿದಾಗ ಯಂತ್ರಗಳು ಕೆಲಸಮಾಡದೆ ಹೋದುವು ಮತ್ತು ವೈಮಾನಿಕರು ಆವೇಳೆ ವಿದ್ಯುದ್ಕಾಂತೀಯ ಅಲೆಗಳನ್ನು ಪತ್ತೆಹಚ್ಚಿದರು.

ಹಾರುವ ತಟ್ಟೆಗಳು ವಿದ್ಯುದುತ್ಪಾದಕ ಮತ್ತು ಸಂಚರಣ (Transmission) ತಂತಿಗಳನ್ನು ಹಾಳುಗೆಡಹುವಷ್ಟು ಸಾಮರ್ಥ್ಯ ಹೊಂದಿರುವುವೇ ? ೧೯೬೫ರಲ್ಲಿ ಅಮೆರಿಕಾದಲ್ಲಿ ಹಲವು ಬಾರಿ ವಿದ್ಯುತ್ ಸರಬರಾಜು ನಿಂತುಹೋಗಿತ್ತು. ಹಾಗೂ ಹಾರುವ ತಟ್ಟೆಗಳು ಆವೇಳೆ ಕಂಡುಬಂದಿದ್ದುವು. ಇದು ಕಾಕತಾಳೀಯ ನ್ಯಾಯವೇ ? ವಿದ್ಯುಚ್ಛಕ್ತಿ ಸರಬರಾಜು ನಿಂತಲ್ಲಿ ಮಿಲಿಟರಿ ಸಂಪರ್ಕ ಸಾಧನಗಳು ಕಾರ್ಯ ನಿರ್ವಹಿಸಲಾರವು. ಸರಕಾರಿ ಪ್ರಕಟಣೆಯಾಗುವ ಎರಡು ಮಿನಿಟು ಮೊದಲು ರೇಡಿಯೋ ಮತ್ತು

ಸಂಗಡಿಗರು ಸಿರೇಕ್ಯೂಸ್‌ನ ಆಕಾಶದಲ್ಲಿ ಹಾರುವ ತಟ್ಟೆಗಳನ್ನು ನೋಡಿದ್ದರು.

೧೯೬೫ ರಲ್ಲಿ ಓಕ್ಲಾಹಮದಲ್ಲಿ ಹಾರುವ ತಟ್ಟೆಯು ಧರೆಗಿಳಿದು ತಂಗಿದಾಗ ಸ್ಮಿತ್‌ನು ಅದರ ಛಾಯಾಚಿತ್ರ ತೆಗೆದುಕೊಂಡನು.

೧೯೫೪ ಜುಲೈ ಒಂದರಂದು ಗ್ರಿಫಿಸ್ ವಾಯುದಳ ಕೇಂದ್ರದ (ನ್ಯೂಯಾರ್ಕ್) ರೇಡಾರ್‌ನಲ್ಲಿ ಒಂದು ವಿಚಿತ್ರ ಸಂಕೇತ ಕಂಡು ಬಂತು. ಆ ವೇಳೆಯಲ್ಲಿ ಆಕಾಶದಲ್ಲಿ ಅದಾವ ವಿಮಾನವು ಇದ್ದಿರಲಿಲ್ಲ. ಕೂಡಲೇ F-೯೪ ಸ್ಟಾರ್ ಫೈರ್ ಜೆಟ್ಟನ್ನು ಭೂಮಿ ನಿಯಂತ್ರಣದಿಂದ ಕಳುಹಿಸಲಾಯಿತು. ಅದರ ಪೈಲೆಟನು ಬಿಲ್ಲೆ ಯಾಕಾರದ ಒಂದು ವಸ್ತುವು ತನ್ನಿಂದ ಹಲವು ಸಾವಿರ ಅಡಿಗಳಷ್ಟು ದೂರದಲ್ಲಿರುವುದನ್ನು ಕಂಡು ಅದನ್ನು ಬೆನ್ನಟ್ಟಿದನು. ಇದರಿಂದಾಗಿ ಅಂತರವು ಕಡಿಮೆಯಾಗುತ್ತಿತ್ತು. ಕೂಡಲೇ ಕೋಕ್‌ಪಿಟ್ ಮೂಲಕ ಜ್ವಾಲೆಯು ವಿಮಾನದೊಳಗೆ ಪ್ರವೇಶಿಸಿದಂತಾಯಿತು ಮತ್ತು ರೇಡಿಯೋ ಸಂಪರ್ಕ ಕಡಿದುಹೋಯಿತು. ಆಶ್ಚರ್ಯ ವೆಂಬಂತೆ ವಿಮಾನಕ್ಕೆ ಬೆಂಕಿ ಹಿಡಿಯಲಿಲ್ಲ. ಕೆಲವೇ ಕ್ಷಣಗಳಲ್ಲಿ ಜೆಟ್ ಉರುಳಿಬಿದ್ದು ನಾಲ್ವರನ್ನು ಆಹುತಿ ತೆಗೆದುಕೊಂಡಿತು.

ಕ್ಯಾಪ್ಟನ್ ಜೇನ್ ಬೈಸಾಕ್ ಪೋರ್ಟೋ ಆಲೆಗ್ರೆಯಿಂದ ...-೪೬ನ್ನು ಉಡಾಯಿಸಿ, ಸಾವೋಪೌಲ್, ಬ್ರೇಜಿಲ್‌ಗೆ ನಡೆಸು ತ್ತಿದ್ದನು. ಅಷ್ಟರಲ್ಲಿ ಹಾರುವ ತಟ್ಟೆಯೊಂದು ವಿಮಾನವನ್ನು ಹಿಂಬಾಲಿಸಿತು. ಕೆಲವು ಕ್ಷಣದೊಳಗೆ ಅದು ವಿಮಾನವನ್ನು ಮುತ್ತಿಗೆಹಾಕಿ ಟ್ರಾನ್ಸಿಮಿಟರ್, ರೇಡಿಯೋ ಮುಂತಾದ ಉಪ ಕರಣಗಳನ್ನು ಸಂಪೂರ್ಣ ಸುಟ್ಟುಬಿಟ್ಟಿತು.

೧೯೫೩ರಲ್ಲಿ ಬ್ರಿಟಿಶ್ ನಿರ್ಮಿತ ಕೊಮೆಟ್ ಜೆಟ್‌ಲೈನರ್ ಕಲ್ಕತ್ತಾದ ಢಮ್ ಢಮ್ ನಿಲ್ದಾಣದಿಂದ ಯಾನಕ್ಕೆ ಹೊರಟಿತ್ತು.

ಸ್ವಲ್ಪ ಹೊತ್ತಿನಲ್ಲೇ ಅದು ಅಪಘಾತಕ್ಕೀಡಾಯಿತು. ಆ ವಿಮಾನವು ಒಂದು ಘನವಸ್ತುವಿನೊಂದಿಗೆ ಡಿಕ್ಕಿ ಹೊಡೆದು ನಾಶವಾಯಿತೆಂದು ಪರಿಣತರ ವರದಿಯಾಗಿತ್ತು. ಕೆಲವರು ಅದು ಬೆಂಕಿ ಹೊತ್ತಿಕೊಂಡು ಅಪಘಾತಕ್ಕಿಡಾಯಿತೆಂದರು. ಆದರೆ ಕೋಕ್‌ಪಿಟ್, ವಿಮಾನದ ಹಿಂಭಾಗಕ್ಕಿಂತ ಅತ್ಯಧಿಕ ದೂರದಲ್ಲಿ ಬೇರ್ಪಟ್ಟು ಬಿದ್ದಿತ್ತು. ಬೆಂಕಿಯಿಂದ ಈ ರೀತಿಯಾಗಲು ಸಾಧ್ಯವೇ ?

ಅಕ್ಟೋಬರ್ ೧೯೫೩ರಲ್ಲಿ ಅಮೆರಿಕಾದ Dc-೬ ಫಿಲಿಡೆಲ್ಫಿಯಾದಿಂದ ವಾಶಿಂಗ್ಟನ್ನಿಗೆ ಯಾನಮಾಡುತ್ತಿತ್ತು. ಅದರ ಸಹ ಪೈಲಟನು ಒಂದು ವಸ್ತುವು ಸೂಸುವ ಬೆಳಕನ್ನು ಕಂಡನು. ಪೈಲೆಟ್ ಕಿಡ್ ಕೂಡಲೇ ಅದನ್ನು ಹಿಂಬಾಲಿಸಿದನು. ಆ ವಸ್ತುವನ್ನು ಸಮೀಪಿಸುತ್ತಿದ್ದಂತೆಯೇ ಒಮ್ಮೆಯೇ ವಿಮಾನವನ್ನು ೫೦೦೦ ಅಡಿ ಆಳಕ್ಕೆ ದೂಡಿದಂತಾಯಿತು. ಅಂತೂ ಅತ್ಯಂತ ಸ್ಥಿಮಿತದಿಂದ ವಿಮಾನವನ್ನು ಹೇಗೊ ಭೂಮಿಗೆ ಇಳಿಸಿದನು.

ಹಾರುವ ತಟ್ಟೆಗಳ ಉಗಮದ ಬಗ್ಗೆ ಮಾಹಿತಿ ಕಲೆಹಾಕಲು ವಿಜ್ಞಾನಿಗಳು ಅನೇಕ ಬಾರಿ ಯತ್ನಮಾಡಿದ್ದರು. ೧೯೫೮ರಲ್ಲಿ ಬ್ರೆಜಿಲ್‌ನ ಇಗಾಪೆಯಲ್ಲಿ ಸುಮಾರು ೧೬ ಅಡಿ ವ್ಯಾಸದ ಒಂದು ಹಾರುವ ತಟ್ಟೆ ಕಂಡುಬಂದಿತು. ಅದು ನದಿಯೊಂದನ್ನು ದಾಟುವ ಅವಸರದಲ್ಲಿ ಒಂದು ಮರಕ್ಕೆ ಡಿಕ್ಕಿ ಹೊಡೆಯಿತು. ಆಗ ಲೋಹದ ನಾದವು ಕೇಳಿಬಂತು. ಅದು ಬಳಿಕ ವಿಲವಿಲನೆ ಒದ್ದಾಡುತ್ತಾ ಹಾರಲು ಪ್ರಯತ್ನಿಸುತ್ತಾ ಕೊನೆಗೆ ಆಗದೆ ನೀರಿಗೆ ಧುಮುಕಿತು. ಆಗ ಬಿಸಿವಸ್ತುವನ್ನು ನೀರಲ್ಲಿ ತುರುಕಿಸಿದಾಗ ಉಂಟಾಗುವಂತಹ ಸದ್ದು (Hissing noise) ಕೇಳಿಸಿತು. ಆದರೆ ಉಗಿಯೆದ್ದದ್ದು ಕಾಣಿಸಲಿಲ್ಲ. ಪರಿಣತರು ನದಿಯ ಆ ಜಾಗವನ್ನು ಪರೀಕ್ಷಿಸಿದಾಗ ಯಾವ ಕುರುಹೂ ದೊರಕಲಿಲ್ಲ. ಬಹುಶಃ ಅದು ಮಣ್ಣನ್ನು

ಕೊರೆದು ಪಾತಾಳ ಸೇರಿತೋ ಅಥವಾ ರಾತ್ರಿಯ ವೇಳೆ ಆಕಾಶಕ್ಕೆ ಹಾರಿತೋ ಯಾರೂ ತಿಳಿಯರು !

೧೯೫೪ರ ಡಿಸೆಂಬರ್‌ನಲ್ಲಿ ಬ್ರೇಜಿಲ್‌ನಲ್ಲಿ ೩ ಹಾರುವ ತಟ್ಟೆಗಳು ಗುಂಪಾಗಿ ಹಾರುತ್ತಿದ್ದವು. ಇವಲ್ಲಿ ಒಂದು ಅದೇನೋ ಸಮಸ್ಯೆಯನ್ನು ಎದುರಿಸಿದಂತಿತ್ತು. ಹಾಗೂ ಹಾರಲಾರದೆ ಕೆಳಗೆ ಇಳಿಯುತ್ತಿತ್ತು. ಅಷ್ಟರಲ್ಲಿ ಉಳಿದೆರಡು ಸಹಾಯ ಮಾಡಲು ಅದನ್ನು ಸಮೀಪಿಸಿದವು. ಬೆಳ್ಳಿಯಂತೆ ಹೊಳೆಯುತ್ತಿದ್ದ ಒಂದು ದ್ರಾವಣವು ಅದರ ಬುಡದಿಂದ ಇಳಿಯಿತು. ಕೂಡಲೇ ಮೂರು ತಟ್ಟೆಗಳೂ ಕಣ್ಮರೆಯಾದವು. ಡಾ. ರಿಸ್‌ವಾಲ್ಡೊ ಎಂಬ ರಸಾಯನ ವಿಜ್ಞಾನಿಯು ಆ ಪ್ರದೇಶವನ್ನು ಶೋಧಿಸಿ, ಲೋಹವನ್ನು ಸಂಗ್ರಹಿಸಿ ವಿಶ್ಲೇಷಿಸಿದ. ಅದರಲ್ಲಿ ೯೦% ತವರವೂ (Tin) ಉಳಿದ ೧೦% ಗುರುತಿಸಲಾರದಂತಹ ವಸ್ತುವೂ ಇತ್ತು.

೧೯೫೨ ರಲ್ಲಿ ನೋರ್ವೆಯ ಸ್ಪಿಟ್ಸ್‌ಬರ್ಗನ್ ಎಂಬ ದ್ವೀಪದಲ್ಲಿ ಒಂದು ವಿಮಾನವು ದುರಂತಕ್ಕೀಡಾಯಿತು. ಇದು ಒಂದು ಹಾರುವ ತಟ್ಟೆಯಿಂದಾಗಿದ್ದು, ಕೂಡಲೇ ನೋರ್ವೆ ಸರಕಾರವು ಇದರ ವಿಶ್ಲೇಷಣೆಗೆ ಬ್ರಿಟಿಶ್ ಹಾಗೂ ಅಮೆರಿಕನ್ ತಜ್ಞರ ಸಹಾಯವನ್ನು ಕೋರಿತ್ತು. ಇದು ಮಿಲಿಟರಿ ಗುಟ್ಟಾಗಿರುವುದರಿಂದ ಹೆಚ್ಚಿನ ಮಾಹಿತಿ ದೊರೆಯಲಿಲ್ಲ. ಆದರೂ ೧೯೫೫ರಲ್ಲಿ ಒಂದು ಜರ್ಮನ್ ಪತ್ರಿಕೆಯ ಪ್ರಕಟಣೆಯಂತೆ, ವಿಶ್ಲೇಷಣಾ ತಂಡದ ಮುಖ್ಯಸ್ಥ ಡಾರ್ನ್ ಬೈಲನು, "ಇದು ಅತ್ಯಂತ ಕುತೂಹಲಕಾರಿಯಾದ ಘಟನೆಯಾಗಿದೆ ಮತ್ತು ಹಾರುವ ತಟ್ಟೆಗಳನ್ನು ಬೇರೆ ಗ್ರಹದವರೇ ನಿರ್ಮಿಸಿರಬೇಕು. ಅದನ್ನು ತಯಾರಿಸಲು ಉಪಯೋಗಿಸಿದ ವಸ್ತುವಾದರೋ ನಮ್ಮ ಜ್ಞಾನಕ್ಕೆ ಎಟಕುವಂತಹದಲ್ಲವಾಗಿದೆ" ಎಂದಿರುವನು.

ಭೂಮಿಯ ಹೊರಗಿನ ಅಂತರಿಕ್ಷದಲ್ಲಿ ಎಲ್ಲೋ ನಮ್ಮಿಂದಲೂ ಅತಿ ಹೆಚ್ಚು ಪ್ರಗತಿ ಹೊಂದಿದ ಜನಾಂಗವಿದ್ದು ಈ ಹಾರುವ ತಟ್ಟೆಗಳು ಅವರ ಸಂಪರ್ಕ ಸಾಧನಗಳಾಗಿರುವುದು ಸಾಧ್ಯ... ಈ ಬಗ್ಗೆ ಸಂಶೋಧನೆ ನಡೆಸಿದವರಲ್ಲಿ ಯುಗೊಸ್ಲೋವಿಯಾದ ನಿಕೊಲಾ ಟೆಸ್ಲಾನು ಮೊದಲಿಗನು. ಭೂಮಿಯ ಕಾಂತ ಕ್ಷೇತ್ರ ದಿಂದ ಶಕ್ತಿಯನ್ನು ಪಡೆದು ಇತರ ಗ್ರಹಗಳಿಗೆ ಸಂಪರ್ಕವೇರ್ಪಡಿಸಲು ಸಂಕೇತಗಳನ್ನು ಕಳುಹಿಸಬೇಕೆಂಬುದೇ ಆತನ ವಾದ! ಇಂತಹ ವ್ಯವಸ್ಥೆಯೊಂದನ್ನು ಕೊಲೊರಾಡೋದಲ್ಲಿ ಸ್ಥಾಪಿಸಿ, ಕೃತಕವಾದ ಮಿಂಚುಗಳನ್ನು ಪರ್ಯಾಯವಾಗಿ ಉತ್ಪತ್ತಿಸಿ, ಹೊರ ಆಕಾಶಕ್ಕೆ ಕಳುಹಿಸಿದನು. ಅವನ ಹೇಳಿಕೆಯಂತೆ ೧೮೯೯ರಲ್ಲಿ ಕಳುಹಿಸಿದ ಸಂಕೇತಗಳಿಗೆ ಮರುತ್ತರ ದೊರಕಿತು!

ಇದೇ ಸಮಯದಲ್ಲಿ ಮಾರ್ಕೋನಿ 'V' ಅಕ್ಷರವನ್ನು ತಂತಿಯಲ್ಲಿ ೫೦ ಮೈಲು ದೂರದ ಸಂಗಡಿಗರಿಗೆ "ಟೇಪ್" ಮಾಡಿ ಕಳುಹಿಸು ತ್ತಿದ್ದನು. ಈ ಸಂಕೇತದೊಂದಿಗೆ ಅದೇನೋ ಒಂದು ವ್ಯವಸ್ಥಿತ ರೀತಿಯಲ್ಲಿ ಇನ್ನೊಂದು ಸಂಕೇತವೂ ಕೇಳಿಬರುತ್ತಿತ್ತು. ಆದರೆ ಅದನ್ನು ಅರ್ಥಮಾಡಿಕೊಳ್ಳುವುದು ಅವನಿಂದಾಗಲಿಲ್ಲ.

ರೇಡಿಯೋ ಸಂಕೇತಗಳನ್ನು ಫಿಲ್ಮಿನಲ್ಲಿ ಮುದ್ರಿತಗೊಳಿಸುವ ಒಂದು ವ್ಯವಸ್ಥೆಯನ್ನು ಜೆಂಕಿನ್ಸ್ ಆವಿಷ್ಕರಿಸಿದನು. ಇದನ್ನುಪ ಯೋಗಿಸಿ ೧೯೨೪ರಲ್ಲಿ ಚಂದ್ರಗ್ರಹದಿಂದ ಸಂಕೇತ ದೊರೆಯು ವುದೋ ಎಂಬುದಾಗಿ ಪರೀಕ್ಷಿಸಲು ಅಮೆರಿಕಾ ಸರಕಾರವು ಆಜ್ಞಾ ಪಿಸಿತು. ಹಾಗೂ ಈ ಸಮಯದಲ್ಲಿ ಪ್ರಪಂಚದೆಲ್ಲಾ ಟ್ರಾನ್ಸ್ ಮಿಟರುಗಳು ಸಂಕೇತಗಳನ್ನು ಪ್ರೇಷಣೆಗೊಳಿಸಬಾರದೆಂದೂ ವಿಧಿಸಿತು. ಡಾಕ್ಟರ್ ಡೇವಿಡ್ ಟೋಡ್ ಈ ಪ್ರಯೋಗದ ಫಲಿತಾಂಶವನ್ನು ಈ ರೀತಿಯಿತ್ತರು:–"ಫಿಲ್ಮಿನ ಮೇಲೆ ಬಿಳಿಗೆರೆಗಳು

ಮತ್ತು ಬಿಂದುಗಳು ವ್ಯವಸ್ಥಿತ ರೀತಿಯಲ್ಲಿ ಕಂಡುಬರುತ್ತಿದ್ದವು. ಅದರ ಮತ್ತೊಂದು ಮಗ್ಗುಲಲ್ಲಿ ಮನುಷ್ಯರ ಮುಖದಂತಹ ಚಿತ್ರಗಳ ಸಮುದಾಯವೇ ಮುದ್ರಿತವಾಗಿತ್ತು."

ಈ ವಿಚಿತ್ರದಿಂದ ವಿಜ್ಞಾನಿಗಳಿಗೆ ಪರಮಾಶ್ಚರ್ಯ ಉಂಟಾಯಿತು. ೧೯೨೮ರ ಮುದ್ರಿತ ಸಂಕೇತಗಳಿಗೂ, ಟೆಸ್ಲಾ ಮಾರ್ಕೋನಿ ಪ್ರಯೋಗಗಳಲ್ಲೂ ಸಾಮ್ಯತೆಯಿದ್ದಿತು. ೧೮೯೯ರಲ್ಲಿ ಟೆಸ್ಲಾನು ಅತ್ಯಧಿಕ ಆವರ್ತಸಂಖ್ಯೆಯ ಪಟ್ಟಿಯಲ್ಲಿ ವಿಕೀರ್ಣ ಸ್ಪಂದಗಳನ್ನು ಮಿಲಿಯ ವೋಲ್ಟ್‌ಗಳಲ್ಲಿ ಪುನರಾವರ್ತಿಸಿದನು. ಅದೇ ವರ್ಷ ಮಾರ್ಕೋನಿಯು ಮೋರ್ಸ್ ಕೋಡಿನ 'V' ಅಕ್ಷರವನ್ನು ತಂತಿಯಲ್ಲಿ ಪ್ರೇಷಣೆಗೊಳಿಸಿದ್ದನು. ೨೨ ವರ್ಷಗಳ ಅನಂತರ, ಅಂದರೆ ೧೯೨೧ರಲ್ಲಿ ಇದೇ V ಸಂಕೇತವು ಭೂಮಿಯಲ್ಲಿ ಗ್ರಹಿಸಲ್ಪಟ್ಟಿತ್ತು! (ಅಂತರಿಕ್ಷದಿಂದ ಬಂದ ಮರುತ್ತರ!) ಅಂತೆಯೇ ೧೯೦೧ರಲ್ಲಿ ಮಾರ್ಕೋನಿ 'S' ಅಕ್ಷರವನ್ನು ಅಟ್ಲಾಂಟಿಕ್‌ನಲ್ಲಿ ನಿಸ್ತಂತು ಸ್ಪಂದವಾಗಿ ಕಳುಹಿಸಿದನು. ೧೯೨೪ರಲ್ಲಿ ಅದೂ ವಾಪಸು ಬಂದು ಗ್ರಹಿಸಲ್ಪಟ್ಟಿತು! ೧೯೪೭ರಲ್ಲಿ ಅಂದರೆ ೧೯೨೪ ರ ಬಾಹ್ಯಾಕಾಶ. ಭೂಮಿ ಸಂಕೇತ ವಿನಿಮಯ ಪ್ರಯೋಗದ ೨೨ ವರ್ಷಗಳ ಅನಂತರ ಹಾರುವ ತಟ್ಟೆಗಳು ರಶ್ಯಾ ಹಾಗೂ ಸ್ಕೇಂದಿನೇವಿಯಾ ಆಕಾಶಗಳಲ್ಲಿ ಮುತ್ತಿಗೆ ಇಟ್ಟವು. ಈ ಸಾಮ್ಯತೆಗಳಿಂದ ತಿಳಿಯುವುದೇನೆಂದರೆ, ನಮ್ಮಿಂದ ೧೧ ಜ್ಯೋತಿ ವರ್ಷ ದೂರದ ಅದಾವುದೋ ಗ್ರಹ (ನಕ್ಷತ್ರ ?)ದ ಜೀವಿಗಳು ತಾವು ಭೂಮಿಯ ಸಂಕೇತವನ್ನು ಆಲಿಸಲು ಪ್ರಯತ್ನಿಸಿವೆ ಎಂಬುದನ್ನು ನಮಗೆ ತಿಳಿಸುವಂತಿದೆ! ಈ ಕಾಲಾವಧಿಗೆ ಹೊಂದಿಕೊಳ್ಳುವ ನಕ್ಷತ್ರಗಳು—ತಾನ್ ಸೇಟಿ ಮತ್ತು ಎಪ್ಸಿಲಾನ್ ಇರಿಡಾನಿಗಳಾಗಿವೆ.

ಆಗಾಗ್ಯೆ ಬಾಹ್ಯಾಕಾಶದಿಂದ ಭೂಮಿಯತ್ತ ಧಾವಿಸಿಬರು ಉಲ್ಕೆಗಳೂ ಬಾಹ್ಯಾಕಾಶ ಜೀವಿಗಳ ವಿವರಗಳನ್ನು ತಂದಿರುವುವು. ೧೮೬೭ ರಲ್ಲಿ ಹಂಗೇರಿಯಲ್ಲಿ ಬಿದ್ದ ಉಲ್ಕೆಯನ್ನು ಸೂಕ್ಷ್ಮದರ್ಶಕ ದಲ್ಲಿ ವಿಶ್ಲೇಷಿಸಿದಾಗ ಅದರಲ್ಲಿ ಭೂಮಿಯ ಪ್ರಾಚೀನ ಪ್ರಾಣಿಗಳ ಪಳೆಯುಳಿಕೆಗಳಂತಹ ರಚನೆಗಳು ಕಂಡುಬಂದುವು. ೧೯೬೩ರಲ್ಲಿ ಲಂಡನಿನ ಡಾಕ್ಟರ್ ಜಾರ್ಜ್ ಮುಲ್ಲರ್ ಆಫ್ರಿಕಾದಲ್ಲಿ ೧೮೩೮ ರಲ್ಲಿ ಬಿದ್ದ ಉಲ್ಕೆಯ ತುಂಡನ್ನು ವಿಶ್ಲೇಷಿಸಿದಾಗ, ಕ್ಲಿಷ್ಟ ರೀತಿಯಲ್ಲಿ ಸಾವಯವ ಆಮ್ಲಗಳನ್ನೊಳಗೊಂಡ ರೆಸಿನ್ ದೊರೆಕಿತು. ಹಾಗೂ ಭೂಮಿಯಲ್ಲಿ ಸಿಗದಂತಹ ವಿಧದ ನೀರೂ ಅದರಲ್ಲಿರುವುದು ಕಂಡು ಬಂತು. ಸಮುದ್ರಗಳಲ್ಲಿರುವ ಅಲ್ಗೆಯಂತಹ ಪ್ರಾಚೀನ ಜೀವಿಗಳ ಇದರಲ್ಲಿರುವುದು ಸ್ಪಷ್ಟವಾಗಿತ್ತು.

ಬುದ್ಧಿಜೀವಿಗಳು ಬಾಹ್ಯಾಕಾಶದ ಯಾವುದೋ ನಕ್ಷತ್ರದಲ್ಲಿ ಬಹುದಾದ ಸಾಧ್ಯತೆಯನ್ನು ಪರಿಗಣಿಸಿದರೆ, ಭೂಮಿಯಿಂದ ಕಳುಹಿಸಿದ ಪ್ರತಿ ಸಂಕೇತಕ್ಕೂ ಮರುತ್ತರ ದೊರಕಿದೆ. ಮೊದಲ ನ್ಯೂಕ್ಲಿಯ ಸ್ಫೋಟನದ ವೇಳೆ ಹಾಗೂ ರಶ್ಯಾ ಮತ್ತು ಅಮೆರಿಕಾ ಗಳು ಪ್ರಥಮ ಬಾಹ್ಯಾಕಾಶ ನೌಕೆಗಳನ್ನು ಉಡಾಯಿಸಿದ ವೇಳೆ ಹಾರುವ ತಟ್ಟೆಗಳು ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಂಡವು.

ಭೂಮಿಯ ಮೇಲಿನ ಮಾನವನ ವೈಜ್ಞಾನಿಕ ಕ್ರಿಯೆಗಳಿಗೆ ಸಮರ್ಪಕವಾದ ಪ್ರತಿಕ್ರಿಯೆಗಳು ಬಾಹ್ಯಾಕಾಶದಿಂದ ದೊರಕಿದೆ. ಪ್ರಥಮ ಪರಮಾಣು ಸ್ಫೋಟನದ ಒಂದು ವರ್ಷದೊಳಗೆ ಯುರೋಪಿನೆಲ್ಲೆಡೆಯಲ್ಲೂ ಹಾರುವ ತಟ್ಟೆಗಳು ಕಾಣಿಸಿಕೊಂಡವು. ಉಪಗ್ರಹಗಳನ್ನು ಹಾರಿಸಿದಾಗಲಂತೂ ೨, ೩ ದಿನಗಳೊಳಗೆ ಇವು ಕಂಡುಬರುತ್ತಿದ್ದವು. ಇದರಿಂದ ತಿಳಿಯುವುದೇನೆಂದರೆ–ಭೂಮಿ

ಹತ್ತಿರದ ಯಾವುದೋ ನೆಲೆಯಲ್ಲಿ ಇವು ಠಾಣ್ಯಮಾಡಿರಬೇಕು. ಇದು ಚಂದ್ರನಾಗಿರುವ ಸಾಧ್ಯತೆಯು ಹೆಚ್ಚಾಗಿರುವುದು.

ಅಮೆರಿಕಾ ಹಾರಿಸಿದ ರೇಂಜರ್‌-೮ ಭೂಮಿಗೆ ಕಳುಹಿಸಿದ ಕೆಲವು ಚಂದ್ರನ ಛಾಯಾಚಿತ್ರಗಳಲ್ಲಿ ಬಿಳಿ ಮಂದಿರಗಳು (domes) ಕಂಡುಬಂದುವು. ಇವು ಸುಮಾರು ೬೦೦ ಅಡಿ ವ್ಯಾಸಹೊಂದಿದ್ದು ಚಂದ್ರನ ಮೇಲ್ಮೈಯಲ್ಲಿ ಸ್ಥಿರವಾಗಿರದೆ ಆಗಾಗ್ಯೆ ಸ್ಥಳ ಬದಲಿಸುತ್ತಿದ್ದವು. ನ್ಯೂ ಮೆಕ್ಸಿಕೋವಿನ ರಾಬರ್ಟ್‌ ಕುರ್ಟಿಸ್‌ ೧೯೫೬ರಲ್ಲಿ ಚಂದ್ರನ ಫ್ರಾಮೌರಾ ಪ್ರದೇಶದ ಛಾಯಾಚಿತ್ರ ತೆಗೆದುಕೊಂಡು ವಿಶ್ಲೇಷಿಸಿದಾಗ ಅದರಲ್ಲಿ ಶಿಲುಬೆಯಾಕಾರದ ಗುರುತುಗಳು ಮೂಡಿದ್ದುವು. ಇದಕ್ಕೆ ಸಮರ್ಪಕವಾದ ಉತ್ತರ ಇಷ್ಟರತನಕ ದೊರೆಯಲಿಲ್ಲ.

೧೯೩೮ರಲ್ಲಿ ಕಾರ್ಲ್‌ ಜಾನ್‌ಸ್ಕಿಯು ಬಾಹ್ಯಾಕಾಶದಿಂದ ಬರುತ್ತಿರುವ ವಿದ್ಯುತ್ಕಾಂತೀಯ ವಿಸರಣವನ್ನು ಪತ್ತೆಹಚ್ಚಿದನು. ಈ ಸಂಕೇತಗಳು ರೇಡಿಯೋ ಸಂಕೇತಗಳಂತೆಯೇ ಇರುವುವು. ಬಾಹ್ಯಾಕಾಶ ಬುದ್ಧಿ ಜೀವಿಗಳು ಇವನ್ನು ಕಳುಹಿಸಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಈ ವಿಷಯವನ್ನು ಕುರಿತು ಕೂಲಂಕಷ ವಿಶ್ಲೇಷಣೆಯನ್ನು ಅಮೆರಿಕಾದಲ್ಲಿ ನಡೆಸಲಾಯಿತು. ಖಗೋಲ ವಿಜ್ಞಾನಿ ಓಟ್ಸ್ಟೋನ ಅಭಿಪ್ರಾಯದಂತೆ "ಭೂಮಿಗಿಂತ ೨೦ ಜ್ಯೋತಿ ವರ್ಷಗಳ ದೂರದವರೆಗೆ ಇರುವ ಗ್ರಹ ಅಥವಾ ತಾರೆಗಳಲ್ಲಿ ಮಾನವನಂತಹ ಬುದ್ಧಿಜೀವಿಗಳು ವಾಸಿಸಿರುವ ಸಂಭಾವ್ಯತೆಯು ತೀರಾ ಅಲ್ಪವಾಗಿರುವುದು, ಆದರೆ ಅದು ಶೂನ್ಯವಲ್ಲ!" ಈ ಕೊನೆಯ ಮಾತೇ ಮುಂದಿನ ಸಂಶೋಧನೆಗಳಿಗೆ ಸ್ಫೂರ್ತಿ ನೀಡುವುದು.

ಹೊರ ಜಗತ್ತಿನ ಸಂಪರ್ಕ ಸಂಕೇತಗಳು ಎಂತಿರಬಹುದೆಂದ ಊಹಿಸುವುದೂ ಕೂಡ ನಮ್ಮ ಜ್ಞಾನಕ್ಕೆ ನಿಲುಕದ ವಿಷಯ.. ಮಾನವನ ಭೌತಿಕ ರೂಪವು ಒಂದೇ ತೆರನಾಗಿರದು; ಈ ಬ್ರಹ್ಮಾಂಡ ದಲ್ಲಿ ಅನೇಕ ರೂಪದ ನಾಗರಿಕ ಜೀವಿಗಳಿರುವುದು ಖಂಡಿತ ಸಾಧ್ಯ.. ಇದರಿಂದಾಗಿ ಹೊರ ನಾಗರಿಕತೆಯ ಜೀವಿಗಳು ನಮ್ಮಂತಿರದ ಬೇರೆಯೇ ವಿಧದ ರಾಸಾಯನಿಕ ಆಧಾರ (ಪ್ರೋಟೀನಲ್ಲದ ಜೀವ ರೂಪ!)ದ್ದಾಗಿರಬಹುದು. ಪ್ರಾಯಶಃ ಬಾಹ್ಯಾಕಾಶದ ಇಂತಹ ಜೀವಿಗಳ ಅಸ್ತಿತ್ವವನ್ನು ಅರಿಯುವುದು ತುಂಬಾ ಕಷ್ಟವಾದೀತು. ಆದರೆ ಜೀವಿಗಳಲ್ಲಿರುವ ಬುದ್ಧಿಯ ಸರ್ವಸಾಮಾನ್ಯ ಗುಣಗಳು ನಮಗೆ ಜಟಿಲವಾದ ಸಮಸ್ಯೆಗಳನ್ನು ಬಿಡಿಸುವಲ್ಲಿ ನೆರವಾದೀತು.

ಹೊರ ಜಗತ್ತಿನ ನಾಗರಿಕತೆಯ ಬೌದ್ಧಿಕ ಚಟುವಟಿಕೆಯು ಯಾವ ರೂಪದಲ್ಲಿ ತೋರಿಬರುವುದು? ಇದು ಸಂಕೇತಗಳ ಮೂಲಕ ವೆಂದಾದಲ್ಲಿ, ಅವುಗಳು ಹೇಗಿರುವುವು ? ಅವುಗಳ ಅರ್ಥವೇನು? ಸಂಪರ್ಕ ವಿಧಾನಗಳಲ್ಲಿ ರೇಡಿಯೋ ಅಲೆಗಳು ಅತ್ಯಂತ ಸಮರ್ಪಕ ವಾಗಿ ಕಾರ್ಯನಿರ್ವಹಿಸಿದರೂ ಹೊರ ಜಗತ್ತಿನ ಜೀವಿಗಳು ನಮಗ ಈವರೆಗೆ ತಿಳಿಯದಿರುವ ಸಂಪರ್ಕಸಾಧನವನ್ನು ಅಳವಡಿಸಿಕೊಂಡಿರ ಬಹುದು. ಏಕೆಂದರೆ ೧೦೦ ವರ್ಷಗಳ ಹಿಂದೆ ರೇಡಿಯೋ ಅಲೆಗಳ ಪರಿಜ್ಞಾನವೇ ನಮಗಿರಲಿಲ್ಲ. ಹಾಗೆಯೇ ಭವಿಷತ್ತಿನಲ್ಲಿ ಸಂಪರ್ಕ ವಿಧಾನದಲ್ಲಿ ಹೆಚ್ಚಿನ ಆಶ್ಚರ್ಯವು ಒದಗಿಬರಬಹುದು.

೧೯೬೩ರಲ್ಲಿ 'ಕ್ವಾಸಾರ್'ಗಳೆಂದು ಕರೆಯಲ್ಪಡುವ ವಿಶಿಷ್ಟ ಮೂಲಗಳನ್ನು ಬಾಹ್ಯಾಕಾಶದಲ್ಲಿ ದೂರದರ್ಶಕವನ್ನುಪಯೋಗಿಸಿ ಗುರುತಿಸಲಾಯಿತು. ಇವು ಸಾಮಾನ್ಯ ತಾರೆಗಳಂತೆ ಕಂಡು ಬಂದರೂ ಅತ್ಯಂತ ಪ್ರಬಲ ರೇಡಿಯೋ ತರಂಗಗಳನ್ನು ಉತ್ಪತ್ತಿಸ ವುವು. ರೋಹಿತಗ್ರಾಹಿ ವಿಶ್ಲೇಷಣೆಯಿಂದ ಈ ಮೂಲಗಳು ಸೌ

ವ್ಯೂಹದ ಆಕಾಶಗಂಗೆ(ನಮ್ಮ ಗ್ಯಾಲಕ್ಸಿ–milky way) ಗ್ಯಾಲಕ್ಸಿ ಯಿಂದ ಅದೆಷ್ಟೋ ದೂರದಲ್ಲಿರುವುವು ಎಂಬುದು ತಿಳಿದುಬಂದಿದೆ. ಉಳಿದ ಗ್ಯಾಲಕ್ಸಿಗಳಂತೆಯೇ ಕ್ವಾಸಾರ್‌ಗಳೂ ಕೂಡ ಭೂಮಿ ಯಿಂದ ದೂರ ಚಲಿಸುತ್ತಿರುವುವು.

ವಾಸ್ತವಿಕವಾಗಿ ಕ್ವಾಸಾರ್‌ಗಳು ತಾರೆಗಳೂ. ಅಲ್ಲ; ಗ್ಯಾಲಕ್ಸಿ ಗಳೂ ಅಲ್ಲ. ಅವು ಬಿಡುಗಡೆಮಾಡುವ ಬೆಳಕು ಅತ್ಯಂತ ದೊಡ್ಡ ಗ್ಯಾಲಕ್ಸಿ ವಿಸರ್ಜಿಸುವ ವಿಕೀರ್ಣಕ್ಕಿಂತ ಅದೆಷ್ಟೋ ಪಾಲು ತೀವ್ರ ವಾಗಿರುವುದು ಹಾಗೂ ಅತ್ಯಲ್ಪ ಸಮಯಾವಧಿಯಲ್ಲಿ ಅವುಗಳ ಪ್ರಕಾಶವು ಬದಲಾಗುತ್ತಿರುವುದು ಅಂದರೆ ಕ್ವಾಸಾರ್‌ಗಳು ಸಾಪೇಕ್ಷ ವಾಗಿ ಚಿಕ್ಕಗಾತ್ರವುಳ್ಳವು ಎಂದಂತಾಯಿತು. ಕಾರಣ ಪ್ರಕಾಶ ಬದಲಾವಣೆಯ ಆವೃತ್ತಿಯು ಅಲ್ಪಾವಧಿಯಲ್ಲಿ ಉಂಟಾಗುವುದು. ಆದುದರಿಂದ ಕ್ವಾಸಾರ್‌ಗಳು ಅತ್ಯಧಿಕ ಭಾರವಾಗಿದ್ದು ಅತಿ ಸಾಂದ್ರತೆಯುಳ್ಳವು. ಈ ಎಲ್ಲಾ ಅಂಶಗಳು ಖಗೋಳಶಾಸ್ತ್ರಜ್ಞರಿಗೆ ಅತಿ ಮುಖ್ಯವಾಗಿರುವುವು. ಕಾರಣವೇನೆಂದರೆ ಕ್ವಾಸಾರ್‌ಗಳ ಸಂಕೇತಗಳು ಮಾನವ ನಿರ್ಮಿತ ರೇಡಿಯೋ ಸಂಕೇತಗಳನ್ನು ಹೋಲುತ್ತಿರುವುವು.

ರೇಡಿಯೋ ಗ್ಯಾಲಕ್ಸಿ ಮೂಲಗಳಿಂದ ವಿಭಿನ್ನವಾಗಿರುವ ಕ್ವಾಸಾರ್‌ಗಳು ಸೆಂಟಿಮಿಾಟರ್ ತರಂಗಪಟ್ಟಿಯ ವಿಕೀರ್ಣವನ್ನು ವಿಸರಣೆ ಗೊಳಿಸುವುವು. ಈ ತರಂಗಗಳು ಏಕಪಾರ್ಶ್ವತೆ (polarisation) ಯುಳ್ಳವು ಎಂಬುದು ತಿಳಿದುಬಂದಿದೆ. ಇದಕ್ಕಿಂತಲೂ ಮುಖ್ಯ ವಾದ ಸಂಗತಿಯೆಂದರೆ ಕ್ವಾಸಾರ್‌ಗಳ ಪ್ರಕಾಶದಲ್ಲಾಗುವ ತ್ವರಿತ ಬದಲಾವಣೆ ಉದಾಹರಣೆಗೆ ಕ್ವಾಸಾರ್ STA–102 ತನ್ನ ಪ್ರಕಾಶವನ್ನು ೧೦೦ ದಿನಗಳ ಆವೃತ್ತಿಯಲ್ಲಿ ಬದಲಿಸಿಕೊಳ್ಳುವುದು. STA-21 ಕ್ವಾಸಾರ್ ತೋರಿಕೆಗೆ ಮೊದಲಿನಂತಿದ್ದರೂ ಅದರ

ಪ್ರಕಾಶದಲ್ಲಿ ಯಾವ ಬದಲಾವಣೆಯೂ ಆಗದಿರುವುದು ತಿಳಿದು ಬಂದಿದೆ. ZS-446ನಂತಹ ಕ್ವಾಸಾರ್‌ಗಳು ಕೇವಲ ಕೆಲವೇ ತಾಸುಗಳ ಅವಧಿಯಲ್ಲಿ ಪ್ರಕಾಶವನ್ನು ಬದಲಿಸಿಕೊಳ್ಳುವುವು. ಈ ಎಲ್ಲಾ ಪ್ರಾಯೋಗಿಕವಾಗಿ ತಿಳಿದುಬಂದ ಸಂಗತಿಗಳನ್ನು ತಿಳಿದಿರುವ ಪ್ರಕೃತಿಯ ವಿಧಾನಗಳಿಂದ ವಿವರಿಸುವುದು ಇಷ್ಟರ ತನಕ ಸಾಧ್ಯವಾಗಲಿಲ್ಲ. ಕ್ವಾಸಾರ್‌ಗಳು ಬಾಹ್ಯಾಕಾಶದಲ್ಲಿರುವ ಅತ್ಯಂತ ಪುರಾತನ ವಸ್ತುಗಳಾಗಿವೆ. ಅವುಗಳು ಭೂಮಿಯಿಂದ ಬಿಲಿಯನ್ ಜ್ಯೋತಿರ್ವರ್ಷ ದೂರದಲ್ಲಿರುವುವು. ಬಹುಶಃ ಕ್ವಾಸಾರ್‌ಗಳು ಅತೀ ಪ್ರಾಚೀನ ಕಾಲದ ನಾಗರಿಕತೆಯ ಚಟುವಟಿಕೆಯ ಅಂಶಗಳಾಗಿರಬಹುದು ಅಥವಾ ಇವು ಬೌದ್ಧಿಕ ಜೀವಿಗಳ ತಾಂತ್ರಿಕ ಪ್ರಗತಿಯಿಂದ ಮಾರ್ಪಾಡಾದ ಗ್ಯಾಲಾಕ್ಸಿಗಳಾಗಿರಬಹುದು.

೧೯೬೮ರಲ್ಲಿ ಬ್ರಿಟಿಷ್ ವಿಜ್ಞಾನಿಗಳು 'ಪಲ್ಸಾರ್'ಗಳನ್ನು ಆವಿಷ್ಕರಿಸಿದರು. ೧೯೭೪ರ ಹೊತ್ತಿಗೆ ಇವುಗಳ ಸಂಖ್ಯೆ ೩೦೦ಕ್ಕೇರಿತು. ಕ್ವಾಸಾರ್‌ಗಳಂತೆಯೇ ಇವು ಹೊರಸೂಸುವ ತೀವ್ರತೆಯ ವಿಸರಣದಿಂದಾಗಿ ಜನರ ಆಸಕ್ತಿಯನ್ನೇ ಕೆರಳಿಸಿದುವು. ಇವು ರೇಡಿಯೋ ಸಂಕೇತಗಳನ್ನು ಸ್ಪಂದನ ರೂಪದಲ್ಲಿ ಉತ್ಪತ್ತಿಸುವುವು. ವಾಸ್ತವಿಕವಾಗಿ ಬ್ರಿಟಿಷ್ ಖಗೋಳಶಾಸ್ತ್ರಜ್ಞರು ೧೯೬೭ರಲ್ಲೇ ಪಲ್ಸಾರ್‌ಗಳನ್ನು ಕಂಡುಹಿಡಿದಿದ್ದರು. ಆದರೆ ಇದನ್ನು ಗುಪ್ತವಾಗಿರಿಸಿದ್ದರು. ಕೃತಕ ರೇಡಿಯೋ ಸಂಕೇತಗಳಿಗೆ ಮತ್ತು ಪಲ್ಸಾರ್‌ಗಳ ವಿಸರಣ ಸ್ಪಂದನಗಳಿಗೆ ಇರುವ ಸೌಮ್ಯತೆಯೇ ಇದಕ್ಕೆ ಕಾರಣವಾಗಿತ್ತು. ನಿಜವಾಗಿ ಪಲ್ಸಾರ್‌ಗಳು ವಿಸ್ಮಯಕಾರಿ ವಸ್ತುಗಳು. ಅವುಗಳ ರೇಡಿಯೋ ವಿಸರಣವು ನಿರ್ದಿಷ್ಟ ಆವೃತ್ತಿಯಲ್ಲಿ ಬದಲಾಗುತ್ತಿರುವುದು ಉದಾಹರಣೆಗೆ, ಪ್ರಥಮವಾಗಿ ಆವಿಷ್ಕರಿಸಲ್ಪಟ್ಟ ಪಲ್ಸಾರಿನ

ರೇಡಿಯೊ ವಿಸರಣವು ಪ್ರತಿ ೧.೩೩೭೩೦೧೧೩ ಸೆಕೆಂಡ್‌ಗೆ ಕ್ರಮ ಬದ್ಧವಾಗಿ ಬದಲಾಗುತ್ತಿತ್ತು.

ಪಲ್ಸಾರ್‌ಗಳು ನಿರಂತರವಾಗಿ ಸ್ಪಂದಿಸದೆ, ಒಂದು ಸ್ಪಂದದ ವಿಸರಣೆಯಾಗಿ, ಅದು ಚಲಿಸುವ ಸಮಯದಲ್ಲಿ ವಿಸರಣೆಯ ತರಂಗಾಂತರವನ್ನು ಬದಲಿಸುವುವು. ಕೆಲವೊಮ್ಮೆ ಕೆಲವು ನಿಮಿಷ ಗಳ ತನಕ ಅವು ಸ್ಪಂದಿಸದೆ, ಪುನಃ ಮೊದಲಿನಂತೆಯೇ ಸ್ಪಂದಗಳ ನ್ನುಂಟುಮಾಡುವುವು ಹಾಗೂ ವಿಸರಣೆಯ ತೀವ್ರತೆಯೂ ಬದಲಾ ಗುತ್ತಿರುವುದು.

ಈ ತನಕ ದೊರೆತ ಅಂಕಿ ಅಂಶಗಳಿಂದ ಪಲ್ಸಾರ್‌ಗಳು ಭೂಮಿ ಯಿಂದ ಸಾವಿರಾರು ಜ್ಯೋತಿ ವರ್ಷಗಳ ದೂರದಲ್ಲಿರುವುವು ಎಂಬು ದಾಗಿ ಹೇಳಬಹುದು. ಅಂದರೆ ಕ್ವಾಸಾರ್‌ಗಳಂತೆಯೇ ಇವೂ ನಮ್ಮ ಗ್ಯಾಲಕ್ಸಿಯೊಳಗೇ ಇರುವುವು. ಪಲ್ಸಾರ್‌ಗಳು ಅಧಿಕ ಆವೃತ್ತಿ ಯಲ್ಲಿ ರೇಡಿಯೋ ವಿಸರಣವನ್ನು ಬದಲಾಯಿಸುತ್ತಿರುವುದರಿಂದ ಅವು ಭೂಮಿಗಿಂತಲೂ ಚಿಕ್ಕ ಗಾತ್ರದವು ಆಗಿರಬೇಕು.

ಭೂಮಿಯ ಜನಾಂಗದ ತಾಂತ್ರಿಕ ಜ್ಞಾನದಲ್ಲಿ ಲೇಸಾರ್ ಮೇ ಸಾರ್ ಆವಿಷ್ಕಾರಗಳು ತೀರ ಇತ್ತೀಚಿನವು. ೧೯೬೫ರಲ್ಲಿ ಬಾಹ್ಯಾ ಕಾಶದಲ್ಲಿ ಖಗೋಳಶಾಸ್ತ್ರಜ್ಞರು ಲೇಸಾರ್ ಕಿರಣಾವಳಿಯನು ಪತ್ತೆಹಚ್ಚಿದಾಗ ಅವರಿಗಾದ ಆಶ್ಚರ್ಯವೆಷ್ಟು? ನಿರ್ವಾತ ಅನಿಲ ನೆಬ್ಯುಲೆಯ ಅಂತರಾಳದಲ್ಲಿ ೧೮ ಸೆಂ.ಮೀ. ತರಂಗಾಂತರದ ಲೇಸಾರ್ ಕಂಬಿಯು ಉಗಮವಾಗಿರುವುದನ್ನು ಗುರುತಿಸಲಾಗಿದೆ. ಇವುಗಳಲ್ಲಾಗುವ ಆವರ್ತ ಬದಲಾವಣೆಯನ್ನು ಲೆಕ್ಕಿಸಿದರೆ, ಈ ಮೂಲಗಳು ನಮ್ಮದೇ ಗ್ಯಾಲಕ್ಸಿಯಲ್ಲಿರುವ ಸಂಭಾವ್ಯತೆಯಿದೆ. ಕ್ವಾಸಾರ್, ಪಲ್ಸಾರ್ ಮೂಲಗಳ ಸಂಕೇತಗಳೂ, ಲೇಸಾರ್

ಕಂಬಿಗಳೂ ಅಂತರಿಕ್ಷ ನಾಗರಿಕತೆಯ ತಾಂತ್ರಿಕ ಮುನ್ನಡೆಯ ಸೂಚನೆಗಳಾಗಿರಬಹುದೇ ?

ಪಲ್ಸಾರ್‌ಗಳ ಆವಿಷ್ಕಾರದ ಸುದ್ದಿ ಕೇಳಿದೊಡನೆ ಸೋವಿಯತ್ ವಿಜ್ಞಾನಿ ಜೆಲ್ಡೊವಿಚ್‌ನು "ಇದುಬಾಹ್ಯಾಕಾಶದ ಬುದ್ಧಿಜೀವಿಗಳ ತಾಣವಾಗಿರಬಹುದೆಂಬ ಅನುಮಾನವೇ ಮೊದಲಿಗೆ ಬರುವುದು" ಎಂದಿರುವನು. ಪಲ್ಸಾರ್ ತಾರೆಗಳು ನ್ಯೂಟ್ರಾನು ತಾರೆಗಳಾಗಿವೆ ಇವು ಅತ್ಯಧಿಕ ಭರದಿಂದ ಒಮ್ಮೆ ವಿಕಾಸಗೊಳ್ಳುತ್ತವೆ ಒಮ್ಮೆ ಸಂಕುಚಿತಗೊಳ್ಳುತ್ತವೆ. ಇದರಿಂದಾಗಿ ಆವರ್ತಶೀಲ ಸಂಕೇತಗಳು ರೂಪುಗೊಳ್ಳುತ್ತವೆ ಎನ್ನುವರು. ಸೂಪರ್‌ನಾವೆ ಎಂದು ಕರೆಯಲಾಗುವ ತಾರೆಗಳ ಸ್ಫೋಟನದಿಂದ ಸೃಷ್ಠಿಯಾದ ಅನಿಲ ನೆಬುಲ್ಲೆಗಳಲ್ಲಿ ಹಲವು ಪಲ್ಸಾರ್‌ಗಳಿರುವ ಸಂಗತಿಯು ಇತ್ತೀಚೆಗೆ ತಿಳಿದುಬಂದಿದೆ. ಕ್ರೇಬ್ ನೆಬುಲ್ಲಾದಕೇಂದ್ರದಲ್ಲೇ ಒಂದು ಪಲ್ಸಾರ್ ಆಶ್ರಯಪಡೆದಿರುವುದು ಕಂಡುಬಂದಿದೆ. ಇಂತಹ ಆವಿಷ್ಕಾರಗಳು "ನ್ಯೂಟ್ರಾನುವಾದ"ವನ್ನು ಪುಷ್ಟೀಕರಿಸುವುವು ಹೊರತು ವಿಸ್ಮಯಕಾರಿ ವಸ್ತುಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಪಲ್ಸಾರ್‌ನ ವಿಸರಣವು ಏಕಪಾರ್ಶ್ವತೆಯನ್ನು ಹೊಂದಿರುವುದು ಗಮನಿಸಬೇಕಾದ ವಿಷಯ. ಪಲ್ಸಾರ್ ವಿಸರಣ ಕ್ರಿಯೆಗೆ ಅವಶ್ಯವುಳ್ಳ ಕಾಂತೀಯ ಕ್ಷೇತ್ರದ ಅಸ್ತಿತ್ವವನ್ನು ಇಷ್ಟರತನಕ ತೋರಿಸಲಾಗಲಿಲ್ಲ. ಅಂದರೆ ಮೇಲಿನ ಕ್ರಿಯೆಯಿಂದ ಸಂಕೇತಗಳು ಉತ್ಪಾದನೆಗೊಳ್ಳುವುವು ಎಂದು ದೃಢವಾಗಿ ಹೇಳುವಂತಿಲ್ಲ. ಪಲ್ಸಾರ್ ಸಂಕೇತಗಳ ಆವರ್ತಶೀಲತೆಯು ಕೃತಕವಾಗಿ ಉತ್ಪಾದಿಸಿದ ರೇಡಿಯೋ ಸಂಕೇತಗಳನ್ನು ಹೋಲುತ್ತದೆ.

ಆಧುನಿಕ ಖಗೋಲ ವಿಜ್ಞಾನದಲ್ಲಿ ಇನ್ನೊಂದು ಜಟಿಲವಾದ ಸಮಸ್ಯೆಯೆಂದರೆ, ಅನೇಕ ಸಂಖ್ಯೆಯಲ್ಲಿ ಸಂಶಯಕಾರಿ ಹಾಗೂ ವಿಚಿತ್ರ ವಸ್ತುಗಳು ಆವಿಷ್ಕಾರವಾಗಿದ್ದು, ಅವು ಕೃತಕ ಮೂಲ

ಗಳನ್ನು ಹೋಲುತ್ತಿರುವುವು. ಪ್ರಾಯಶಃ ಇವು ಈ ತನಕ ತಿಳಿಯು ದಿರುವ ವಸ್ತುಗಳಾಗಿರಬಹುದು, ಇಲ್ಲವೇ ಹೊರಆಕಾಶದ ತಾಂತ್ರಿಕ ಮುನ್ನಡೆಯ ತಾಣಗಳಾಗಿರಬಹುದು.

ಹಾರುವ ತಟ್ಟೆಗಳ ವಿಶ್ಲೇಷಣೆಯನ್ನು ಅಮೆರಿಕಾದ ವಿಮಾನ ದಳದ ಡಾ. ಎಡ್‌ವರ್ಡ್ ಕಾಂಡನ್‌ರವರು ಮಾಡುತ್ತಿರುವರು ಹಾಗೂ ಈ ದಿಶೆಯಲ್ಲಿನ ಅವರ ಸಂಶೋಧನೆಗಳು ಪ್ರಪಂಚದಲ್ಲೆಲ್ಲಾ ಸ್ವೀಕೃತವಾಗಲು ತೊಡಗಿವೆ.

ಕ್ಯಾಲಿಫೋರ್ನಿಯಾದ ಸ್ಟಾನ್‌ಫರ್ಡ್ ವಿಶ್ವವಿದ್ಯಾನಿಲಯದ ಖಗೋಲವಿಜ್ಞಾನಿ ಡಾ. ರೋನಾಲ್ಡ್ ಬ್ರೇಸ್‌ವೆಲ್ಲರ ಅಭಿಪ್ರಾಯ ವನ್ನು ತಿಳಿಯುವ. ಅವರೆನ್ನುವರು—ಸಧ್ಯದಲ್ಲೇ ಬಾಹ್ಯಾಕಾಶದ ನಾಗರಿಕತೆಯಲ್ಲಿ ಅತಿ ಮುಂದುವರಿದ ಜನಾಂಗವು ಭೂಮಿಯೊಡನೆ ಉಪಗ್ರಹಗಳನ್ನುಪಯೋಗಿಸಿ ಸಂಪರ್ಕ ಬೆಳೆಸುವುವು. ಈ ಉಪಗ್ರಹ ಗಳು ಹೆಚ್ಚೆಂದರೆ ಒಂದು ಚೆಂಡಿನಷ್ಟು ದೊಡ್ಡದಿರಬಹುದು ಮತ್ತು ಅವನ್ನು ನಡೆಸುವವರು ಹುಮೆನ್ಯಾಡ್ ಎಂಬ ವಿಶಿಷ್ಟ ಜೀವಿಗಳು. ಅವರ ಮೆದುಳು ಒಂದು ಅತಿ ಚಿಕ್ಕ ಗಣಕಯಂತ್ರವಾಗಿರುವುದು. ಇಂತಹ ಅಂತರಿಕ್ಷ ಜೀವಿಗಳ ಸಂಪರ್ಕದಿಂದ ನಾವು ಗಾಬರಿಯಾಗ ಬೇಕಾಗಿಲ್ಲ ಕಾರಣ ಅವರು ಇಲ್ಲಿನ ನಾಗರಿಕತೆ ತಿಳಿಯಲೆಂದೇ ಭೂಮಿಗೆ ಬರುತ್ತಿರುವರು. ಅಷ್ಟೇ ಅಲ್ಲದೆ ನಮಗಿಂತ ನಾಗರಿಕತೆ ಯಲ್ಲಿ ಮಿಲಿಯಗಟ್ಟಲೆ ವರ್ಷಗಳಷ್ಟು ಅವರು ಮುಂದಿದ್ದಲ್ಲಿ ಇಂತಹ ಸಂಪರ್ಕದಿಂದ ನಮ್ಮ ಭವಿಷತ್ತಿನ ಆವಿಷ್ಕಾರಗಳು ಸುಗಮವಾಗ ಬಹುದು. ಅನೇಕ ರೋಗಗಳನ್ನು ತಡೆಗಟ್ಟಬಹುದು. ಮೂಲಗ್ರಹ ದಿಂದ ಎಲ್ಲೆಡೆಯಲ್ಲೂ ಹೊರಟ ಉಪಗ್ರಹಗಳು (ಹಾರುವ ತಟ್ಟೆಗಳು) ಆಗಿಂದಾಗ್ಯೆ ಹೊಸಗ್ರಹಗಳನ್ನು ಆವಿಷ್ಕರಿಸಿ, ಆ ವರ್ತಮಾನವನ್ನು ಮೂಲಗ್ರಹಕ್ಕೆ ಕಳುಹಿಸುವುವು. ಬಳಿಕ ಮೂಲಗ್ರಹ (ನಕ್ಷತ್ರ?)

ದಿಂದ ಆವಿಷ್ಕರಿಸಲ್ಪಟ್ಟ ಗ್ರಹಕ್ಕೆ ನೇರಸಂಪರ್ಕದ ವ್ಯವಸ್ಥೆವುಂಟಾಗುವುದು ಸಾಧ್ಯ.

ನಮ್ಮ ಸೌರವ್ಯೂಹದ ಆವಿಷ್ಕಾರಕ್ಕೆ ಹೊರಟ ಜೀವಿಗಳು ೫೦ ಜ್ಯೋತಿರ್ವರ್ಷ ದೂರದ ನಕ್ಷತ್ರಗಳ ನಿವಾಸಿಗಳಾಗಿದ್ದಲ್ಲಿ ಆದಾಗಲೇ ನಮ್ಮ ರೇಡಿಯೋ ಸಂಕೇತಗಳನ್ನು ಅವರು ಗ್ರಹಿಸಿರಬಹುದು. ಇದೇ ರೀತಿಯಲ್ಲಿ ನಮ್ಮ ರೇಡಿಯೋಸಾಧನ ಆವಿಷ್ಕೃತಸಲ್ಪಡುವ ಮೊದಲು ಭೂಮಿಯೊಡನೆ ಸಂಪರ್ಕ ಬೆಳೆಸಲು ಕೆಲವು ಗ್ರಹಗಳಾದರೂ ಪ್ರಯತ್ನಿಸಿರಬಹುದು. ಒಟ್ಟಿನಲ್ಲಿ ಇಂತಹ ಸಂಪರ್ಕವು ಯಾವಾಗ ಒದುಗುವುದು ಎಂದು ನಿಶ್ಚಿತವಾಗಿ ಹೇಳುವಂತಿಲ್ಲ. ಅಂತರಿಕ್ಷದಲ್ಲಿ ಕಡಿಮೆಯೆಂದರೆ ಒಂದು ಮಿಲಿಯ ತಾರೆಗಳಲ್ಲಾದರೂ ಜೀವನಕ್ಕೆ ಯೋಗ್ಯವಾದ ತಾಪವೂ ಇಂಗಾಲವೂ ಇರುವುದು ಮತ್ತು ಇವೆಲ್ಲವೂ ಸೌರವ್ಯೂಹಕ್ಕಿಂತ ಕಡಿಮೆಯೆಂದರೆ ೧೦೦ ಜ್ಯೋತಿರ್ವರ್ಷ ದೂರದೊಳಗೆ ಇರುವುವು. ಕೆಲವು ಗ್ರಹಗಳಲ್ಲಾದರೂ ವಿಕಾಸವು ಸಾಗುತ್ತಿದ್ದು, ಕೆಲವು ಅತಿ ನಾಗರಿಕತೆಯ ಹಂತದಲ್ಲಿದ್ದರೆ ಇನ್ನು ಕೆಲವು ವಿಕಾಸಹೊಂದದ ಹಂತದಲ್ಲಿರಬಹುದು. ನಮಗಿಂತಲೂ ನಾಗರಿಕತೆಯ ಬುದ್ಧಿ ಜೀವಿಗಳ ಆಕಾರವು ನಮಗಿಂತ ಭಿನ್ನವಾಗಿರುವುದು ಸ್ವಾಭಾವಿಕ ಹಾಗೂ ಸಂಪರ್ಕಕ್ಕೆ ಉಪಯೋಗಿಸುವ ಉಪಗ್ರಹಗಳೂ ಸಣ್ಣದಾಗಿದ್ದು ಅವಲ್ಲಿ ರೇಡಿಯೋ ಟ್ರಾನ್ಸ್‌ಮಿಟರ್ ಮೊದಲಾದವನ್ನೊಳಗೊಂಡ ಗಣಕಯಂತ್ರ ಮಾನವರು ಕುಳಿತಿರಬಹುದು. ಇವರು ಭೂಮಿಯ ರೇಡಿಯೋ ಸಂಕೇತಗಳನ್ನು ಗ್ರಹಿಸಿ ಉತ್ತರವನ್ನು ನೀಡಬಹುದು.

ಮೂಲಗ್ರಹಕ್ಕೂ ಭೂಮಿಗೂ ಕನಿಷ್ಠವೆಂದರೆ ವರ್ತಮಾನದ ವಿನಿಮಯಕ್ಕೆ ೨೦ ವರ್ಷಗಳಾದರೂ ಹಿಡಿದೀತು. ಹಾಗೂ ಅವು ಒಬ್ಬರನ್ನೊಬ್ಬರು ಕಾಯದೆ ತಮ್ಮ ತಮ್ಮ ವರ್ತಮಾನಗಳನ್ನು

ಸಂಕೇತಗಳ ಮೂಲಕ ಕಳುಹಿಸುತ್ತಲೇ ಇರುವುವು. ಅಂದರೆ ಇದು ಜನಾಂಗ ಜನಾಂಗದೊಳಗೆ ನಡೆಯುವ ಸಂಭಾಷಣೆಯಾಗಿದೆ. ವೈಜ್ಞಾನಿಕ, ಸಾಮಾಜಿಕ ಮತ್ತು ವೈದ್ಯಕೀಯ ಕ್ಷೇತ್ರಗಳ ಪ್ರಗತಿಯ ಕುರಿತು ಅವರು ಸಂಭಾಷಣೆ ನಡೆಸಬಹುದು. ಇದರಿಂದ ಭೂಮಿಯ ಜನಾಂಗಕ್ಕೆ ಮುಂದೆ ಎದುರಿಸಬೇಕಾದ ವಿವಿಧ ಕ್ಷೇತ್ರಗಳಲ್ಲಿನ ಸಮಸ್ಯೆಗಳಿಗೆ ಪರಿಹಾರ ದೊರಕೀತು.

ಆದರೆ ಇಂತಹ ಸಂಪರ್ಕಗಳ ಪತ್ತೆಹಚ್ಚುವುದೆಂತು? ಬ್ರೇಸ್‌ವೆಲ್ಲರು ಮುನ್ನೆಚ್ಚರಿಕೆ ನೀಡುತ್ತಾರೆ–ರೇಡಿಯೋ, ದೂರದರ್ಶಕ ಮತ್ತು ಮೈಕ್ರೊವೇವ್‌ಗ್ರಾಹಕಗಳಲ್ಲಿ ಕೆಲಸಮಾಡುವ ತಂತ್ರಜ್ಞರು ಏನಾದರೂ ಹೊಸರೀತಿಯ ಸಂಕೇತಗಳನ್ನು ಪತ್ತೆಹಚ್ಚಿದಲ್ಲಿ ಅವನ್ನು ತಿರಸ್ಕರಿಸದೆ ಮುತುವರ್ಜಿಯಿಂದ ಗಮನಿಸಬೇಕು. ಆ ಸಂಕೇತವು ಅಂತರ್‌ಕ್ಷಬುದ್ಧಿಜೀವಿಗಳ ಸಂಪರ್ಕದ ಒಂದು ಯತ್ನವಾಗಿರಬಹುದು.

ರಷ್ಯಾದ ವಿಜ್ಞಾನಿ ಗಿಂಜಿ ಬರ್ಗರ ಅಭಿಪ್ರಾಯದಂತೆ ಇಂತಹ ಶೋಧವು ಕೇವಲ ಒಂದು ದೇಶಕ್ಕೆ ಆರ್ಥಿಕವಾಗಿ ನಿರ್ವಹಿಸುವುದು ಕಷ್ಟಸಾಧ್ಯವಾಗಬಹುದು. ಆದುದರಿಂದ ಅಂತರರಾಷ್ಟ್ರೀಯ ಯತ್ನವು ಈ ಗಹನವಾದ ಸಮಸ್ಯೆಗೆ ಫಲಕಾರಿಯಾದ ಉತ್ತರವನ್ನು ಕೊಡಬಹುದು. ಪಲ್ಸಾರ್‌ಗಳನ್ನು ಪತ್ತೆಹಚ್ಚಿದ ಬ್ರಿಟಿಷ್ ವಿಜ್ಞಾನಿ ಏಂಟೊನಿ ಹೆನಿಶ್‌ರೂ ಬಾಹ್ಯಾಕಾಶದ ನಾಗರಿಕತೆಯ ಬಗ್ಗೆ ಆಶಾವಾದಿಗಳಾಗಿದ್ದಾರೆ. ಭವಿಷತ್ತಿನಲ್ಲಿ ಇಂತಹ ಆವಿಷ್ಕಾರವಾದರೂ ಹಲವು ವರ್ಷಗಳ ತನಕ ಅದು ರಹಸ್ಯವಾಗಿಯೇ ಉಳಿಯುವ ಸಂಭವವೂ ಇದೆ.

ಈ ತನಕ ನಾವು ಬಾಹ್ಯಾಕಾಶದಲ್ಲಿರಬಹುದಾದ ಬುದ್ಧಿಜೀವಿಗಳ ಮತ್ತು ಅವರದ್ದಾಗಿರಬಹುದಾದ ಹಾರುವ ತಟ್ಟೆಗಳ ಕುರಿತು ತಿಳಿದೆವು. ಈ ಹಿಂದೆ ಇಂತಹ ಜೀವಿಗಳು ಭೂಮಿಗೆ ಇಳಿದು

ಬಂದಿರುವುದಕ್ಕೆ ಸಾಕ್ಷ್ಯದೊರಕಿದೆಯೋ? ಇದನ್ನು ಈಗ ಅರಿಯುವ. ಖಂಡಿತವಾಗಿಯೂ ಅಂತಹ ಜೀವಿಗಳು ಪ್ರಾಚೀನ ಕಾಲದಲ್ಲಿ ಬಂದಿಳಿದಿರುವರು ಎಂಬುದಾಗಿ ಸ್ವಿಸ್ ಪುರಾತತ್ವ ಶಾಸ್ತ್ರಜ್ಞ ಎರಿಕ್ ಡೆನಿಕನ್ ಮತ್ತು ರಷ್ಯಾದ ಖ್ಯಾತಸಾಹಿತಿ ಅಲೆಕ್ಸಾಂಡರ್ ಕಜ್ನತ್ಸೇವ್ ಅಭಿಪ್ರಾಯಪಡುವರು. ತಮ್ಮ ಸಿದ್ಧಾಂತ ಪ್ರತಿ ಪಾದನೆಗೆ ಅವಶ್ಯವಿರುವ ಸಾಕ್ಷ್ಯಗಳನ್ನೂ ಅವರು ಕಲೆಹಾಕಿದ್ದಾರೆ. ನಾಸಾಕ ಮರುಭೂಮಿಯಲ್ಲಿ ದೊರೆತ ಅವಶೇಷಗಳಲ್ಲಿ ಮೂಡಿದ್ದ ರೇಖೆಗಳು ಬೇರೆ ಗ್ರಹನಿವಾಸಿಗಳ ಚಿತ್ರಗಳನ್ನು ಹೋಲುತ್ತಿದ್ದವು. ಸೋವಿಯತ್ ವಿಜ್ಞಾನಿ ಅಗ್ರೆಸ್ಟ್ ಈ ಚಿತ್ರಗಳ ಬಗೆಗೆ ಅಭಿಪ್ರಾಯ ನೀಡಿದ ನಂತರ, ಅನೇಕ ವೈಜ್ಞಾನಿಕ ಗ್ರಂಥಕರ್ತರು ಬಾಹ್ಯಾಕಾಶ ಜೀವಿಗಳ ಕುರಿತು ಗ್ರಂಥ ರಚಿಸಿದರು. ಈ ಹಿಂದೆ ಬಾಹ್ಯಾಕಾಶ ಜೀವಿಗಳು ಭೂಮಿಗಿಳಿದು ಬಂದಿರುವುದರ ಕುರಿತು ಅದೇನೋ ಹೆಚ್ಚಿನ ವೈಜ್ಞಾನಿಕ ವಿಶ್ಲೇಷಣೆ ನಡೆದಿಲ್ಲ ಎನ್ನಬಹುದು. ಆದರೆ ಈ ಅಂಶವನ್ನು ಸಂಪೂರ್ಣ ಅಲ್ಲಗಳೆಯುವಂತಿಲ್ಲ. ಕಾರಣ ಸಾಕಷ್ಟು ಪುರಾವೆಗಳು ದೊರಕಿವೆ.

ಮೆಕ್ಸಿಕೋದ ವಿಜ್ಞಾನಿ ಝೂಸ್‌ಲುಯಿಲಿ, ಮಾಯಾ ಜನಾಂಗದ ದೇಗುಲಗಳಲ್ಲಿ ಕಂಡುಬಂದ ಚಿತ್ರವನ್ನು ಪ್ರಕಟಿಸಿದ್ದಾರೆ. ಈ ಚಿತ್ರವು ಈಗಿನ ಗಗನ ನೌಕೆಯನ್ನೇ ಹೋಲುತ್ತಿರುವುದು ಗಮನಾರ್ಹ ವಾಗಿದೆ. ಹಾಗೂ ಚಿತ್ರವನ್ನು ಜಪಾನಿನಲ್ಲಿ ಪುನರ್ರಚಿಸಿದಾಗ, ಅದರೊಳಗೆ ಗಗನಯಾನಿಯು ಆಧುನಿಕವಾದ ಉಡುಪು ತೊಡುಪು ಗಳಲ್ಲಿ ಕುಳಿತಿರುವಂತೆ ಕಂಡುಬಂತು. ಇದೇ ಜನಾಂಗದ ಸಮಾಧಿ ಶಿಲೆಗಳಲ್ಲಿ ಈಗಿನ ಗಗನ ನೌಕೆ ಯಂತ್ರಗಳನ್ನೇ ಹೋಲುವ ಚಿತ್ರ ಗಳಿರುವುದನ್ನು ಪತ್ತೆಹಚ್ಚಲಾಗಿದೆ.

ಸೋವಿಯತ್ ವಿಜ್ಞಾನಿ ನೊರೊಜೊವ್ ಮಾಯಾ ಜನಾಂಗದ ಕೆಲವು ಪ್ರಾಚೀನ ಹಸ್ತಲಿಖಿತ ಸಾಹಿತ್ಯವನ್ನು ಓದಿ ಸಂಗ್ರಹಿಸಿದ್ದಾರೆ. ಹಾಗೂ ಗಣಕ ಯಂತ್ರದ ಮೂಲಕವೂ ಈ ಸಾಹಿತ್ಯವನ್ನು ಓದಿಸಲಾಗಿದೆ. ಇದರಲ್ಲಿ ಮಳೆ ಇಲ್ಲದೆಯೇ ಆಕಾಶದಲ್ಲಿ ಸಂಭವಿಸಿದ ಗುಡುಗು, ಅಂತರಿಕ್ಷದಲ್ಲಿ ತೋರಿಬರುವ ಆಕೃತಿಗಳು, ಉರಿಯುತ್ತಿರುವ ದೀನ ಮುಖದ ಸೂರ್ಯ ಪುತ್ರರ ವಿವರಣೆಯಿದೆ. ಈ ವೈಶಿಷ್ಟ್ಯಪೂರ್ಣ ಮಾನವರು ಪ್ರಾಯಶಃ ಬೇರೆ ಗ್ರಹದಿಂದ ಭೂಮಿಗೆ ಬಂದ ವ್ಯಕ್ತಿಗಳಾಗಿರಬಹುದೇ? ಮಾಯಾ ಜನಾಂಗದ ಸಮಾಧಿಯಲ್ಲಿ ದೊರೆತ ಮೂಳೆಗಳ ನೆರವಿನಿಂದ ಪುನರ್ರಚಿಸಿದ ಮುಖವಾಡದ ಸೂಕ್ಷ್ಮ ಪರಿಶೀಲನೆಯೂ ಕೆಲವು ಸಂಗತಿಗಳನ್ನು ವ್ಯಕ್ತಪಡಿಸುವುದು ಮುಖವಾಡ ಶಿಲಾ ಮೂರ್ತಿಗಳ ಮುಖವಾಡವನ್ನೇ ಹೋಲುತ್ತಿತ್ತು ಹುಬ್ಬಿನ ನಡುವೆ ಮೂಗಿರುವ ಇಂತಹ ಜನ ವಿಶಿಷ್ಟ ವಂಶದವರಾಗಿರಬಹುದು. ಇಂತಹ ಮಾನವರು ಭೂಮಿಯಲ್ಲಿದ್ದುದಕ್ಕೆ ಈ ತನಕ ಯಾವ ಆಧಾರವೂ ದೊರೆತಿಲ್ಲ. ಎಲ್‌ಸಾಲ್ವಡಾರ್‌ನಲ್ಲಿ ದೊರೆತ ಪ್ರಾಚೀನ ಕುಂಭದ ಮೇಲಿನ ಚಿತ್ರಗಳು ಆಕಾಶ ನೌಕೆಯಂತೆಯೇ ಇದ್ದು, ಅದರೊಳಗಿನ ಗಗನಯಾನಿಯನ್ನೂ ನೋಡಬಹುದಾಗಿದೆ. ಈ ಎಲ್ಲಾ ಆಧಾರಗಳನ್ನು ವಿಶ್ಲೇಷಿಸಿದಾಗ, ಭೂಮಿಗೆ ಬಹು ಹಿಂದೆ ಇತರ ಗ್ರಹನಿವಾಸಿಗಳು ಬಂದಿದ್ದರು ಎನ್ನುವುದನ್ನು ಸುಳ್ಳೆನ್ನುವಂತಿಲ್ಲ.

ಕಜ್ನತ್ಸೇವ್ ಅವರು ಜಪಾನಿನಲ್ಲಿ ಸಂಗ್ರಹಿಸಿದ ಮಣ್ಣಿನ ದೊಗು ಮೂರ್ತಿಯೂ ಕುತೂಹಲಕಾರಿಯಾಗಿದೆ. ಈ ಮಣ್ಣಿನ ಮೂರ್ತಿಗಳು ಆಧುನಿಕ ಗಗನ ಯಾತ್ರಿಯ ಉಡುಪಿನಂತಹದೇ ಉಡುಪನ್ನು ಧರಿಸುವುದು ಗಮನಾರ್ಹ. ಇವು ಸುಮಾರು ೪೦೦೦ ವರ್ಷಗಳ ಹಿಂದಿನದ್ದಿರಬಹುದಾಗಿ ಶಂಕಿಸಲಾಗಿದೆ. ಆಗ್ಗೆ ಜಪಾನಿ

ನಲ್ಲಿ ಶಿಲಾಯುಗವಿದ್ದು, ಆ ಜನಾಂಗವು ರಚನೆಯ ಮಾದರಿಯಿಲ್ಲದೆ ಗಗನ ಯಾತ್ರಿಗಳನ್ನು ಹೋಲುವ ಮೂರ್ತಿ ರಚಿಸಿಯಾರೇ? ಪ್ರಾಯಶಃ ಅಂತರಿಕ್ಷದಿಂದ ಬರುತ್ತಿದ್ದ ಮಾನವರೇ ಶಿಲಾಯುಗದ ಜನರಿಗೆ ಈ ಕೃತಿ ರಚಿಸಲು ಕಾರಣರಾಗಿರಬಹುದು. ಈ ಮೂರ್ತಿಗಳ ಭುಜದಿಂದ ಇಳಿಬಿದ್ದಿರುವ ಚರ್ಮದ ಪಟ್ಟಿಗಳು ಸೊಂಟಕ್ಕೆ ಬಿಗಿದಿರುವ ಪಟ್ಟಿಯನ್ನು ಕೂಡಿಕೊಂಡಿದೆ. ಸೊಂಟದ ಸುತ್ತ ಬಿಗಿದಿರುವುದು ಅಗಲವಾದ ದಪ್ಪನೆಯ ಚರ್ಮದ ಪಟ್ಟಿ. ಈ ವಿಶೇಷ ಬಗೆಯ ಪೋಷಾಕು ಮೂರ್ತಿಯ ಮೊಣಕಾಲಿನವರೆಗೆ ಇಳಿದಿವೆ. ಅಲ್ಲಲ್ಲಿ ಜೇಬುಗಳೂ ಇವೆ. ಮುಖವನ್ನು ಮುಚ್ಚುವ ಶಿರೋಕವಚದಲ್ಲಿ ಉಸಿರಾಡಲು, ನೋಡಲೂ ಸೂಕ್ತ ಉಪಕರಣಗಳನ್ನು ಜೋಡಿಸಲಾಗಿದೆ. ಅತ್ಯಾಶ್ಚರ್ಯವೆಂದರೆ ಮೂರ್ತಿಗೆ ಮುಖವಾಡದಿಂದ ಹೊರನೋಡಲು ಕಣ್ಣಿಗೆ ಸರಿಯಾಗಿ ಭೂತಕನ್ನಡಿಗಳನ್ನು ಅಳವಡಿಸಲಾಗಿದೆ. ಬಲಗೈಯಲ್ಲಿರುವ ದೊಣ್ಣೆಯಂತಹ ಉಪಕರಣವು ಲೇಸಾರ್ ಉಪಕರಣವನ್ನು ಹೋಲುವುದು.

ಚೀನಾ–ಟಿಬೇಟ್ ಗಡಿಗಳ ನಡುವೆ ಇರುವ ಬಯಾನ್ ಹರ್ ಉಲಾದ ಪರ್ವತಗಳಲ್ಲಿನ ಗವಿಗಳನ್ನು ೧೯೩೮ರಲ್ಲಿ ಚೀನಾದ ಪುರಾತತ್ವ ಶಾಸ್ತ್ರಜ್ಞ ಷಿಪುತ್ತೈ ಶೋಧಿಸಿದ. ಅಲ್ಲಿ ಸಾಲಾಗಿ ಸಮಾಧಿಗಳಿದ್ದವು. ತುಂಬ ಸೂಕ್ಷ್ಮ ದೇಹಗಳದ್ದಾಗಿರಬಹುದಾದ ಮೂಳೆಗಳು ಹೇರಳವಾಗಿ ದೊರೆತವು. ಮೂಳೆಗಳು ರಾಶಿಯಲ್ಲೇ ಭಾರೀ ಪ್ರಮಾಣದ ತಲೆಬುರುಡೆಗಳೂ ದೊರೆತವು. ಅಂದರೆ ವ್ಯಕ್ತಿಗಳು ಕುಳ್ಳರಾಗಿದ್ದು ಭಾರಿ ತಲೆಯುಳ್ಳವರೇ ಆಗಿರಬೇಕೆಂದಾಯಿತು. ಈ ವಿಚಿತ್ರ ಅಸ್ತಿಪಂಜರಗಳು ದೊರೆತ ಗುಹೆಗಳ ಗೋಡೆಗಳ ಮೇಲೆ ಕೆಲವು ಚಿತ್ರಗಳೂ ಇದ್ದವು. ಶಿರೋಕವಚ ಧರಿಸಿದ್ದ ವಿಚಿತ್ರ ವ್ಯಕ್ತಿ ಚಿತ್ರಗಳೂ ಇವಲ್ಲಿ ಇದ್ದುವು.

ಅದೇ ಗುಹೆಗಳಲ್ಲಿ ಷಿಪುತ್ರೈ ಸುಮಾರು ೭೦೦ ಬೆಣಚು ಕಲ್ಲಿನ ತಟ್ಟೆಗಳನ್ನು ಸಂಗ್ರಹಿಸಿದನು. ಪ್ರತಿ ತಟ್ಟೆಯೂ ಸುಮಾರು ೩ ಸೆಂ. ವಿೂ. ಅಗಲವಿದ್ದು ನಡುವೆ ರಂಧ್ರ ಉಳ್ಳದಾಗಿತ್ತು. ರಂಧ್ರದ ಸುತ್ತಲೂ ತಟ್ಟೆಯ ಕೊನೆಯ ತನಕ ಹಲವು ಸುತ್ತು ಸಾಲುಗಳಲ್ಲಿ ವಿಚಿತ್ರ ಲಿಪಿಯಲ್ಲಿ ಬರೆದ ಬರಹ ಕಂಡುಬಂತು. ಈ ವಿಸ್ಮಯಕಾರಿ ರಹಸ್ಯವನ್ನು ಭೇದಿಸಲು ೧೯೬೨ ರಲ್ಲಿ ಚೀನಿ ವಿದ್ವಾಂಸರು ಯತ್ನಿಸಿದರು. ಪೀಕಿಂಗ್‌ನ ಪ್ರಾಚೀನ ಇತಿಹಾಸ ಪ್ರಾಧ್ಯಾಪಕರಾದ ತ್ಸುಂಉಂನುಯಿ ತಟ್ಟೆಗಳಲ್ಲಿದ್ದ ಲಿಪಿಯನ್ನು ಓದುವುದರಲ್ಲಿ ಸಫಲರಾದರು. ತಟ್ಟೆಯಲ್ಲಿ ಅಡಕವಾದ ವಸ್ತುವಿಶ್ಲೇಷಣೆ ನಡೆಸಿದಾಗ, ಅದರಲ್ಲಿ ಅಧಿಕ ಪ್ರಮಾಣದಲ್ಲಿ ಕೋಬಾಲ್ಟ್ ಇರುವುದು ಕಂಡು ಬಂತು ಮತ್ತು ತಟ್ಟೆಗಳು ಭಾರಿ ಪ್ರಮಾಣದ ವಿದ್ಯುತ್ ಪ್ರವಾಹಕ್ಕೆ ಒಳಗಾಗಿರಬೇಕೆಂಬ ಅಂಶವೂ ತಿಳಿಯಿತು.

ತಟ್ಟೆಯಲ್ಲಿ ಬರೆದಿರುವ ಬರಹವು ಸುಮಾರು ೧೨ ಸಾವಿರ ವರ್ಷಗಳ ಹಿಂದೆ ಭೂಮಿಗಿಳಿದು ಬಂದ ಹೊರ ಲೋಕದ ಜನರ ಕುರಿತಾಗಿದೆ. ಆ ಬುದ್ಧಿ ಜೀವಿಗಳು ಭೂಮಿಯಲ್ಲೇ ಅನಿವಾರ್ಯವಾಗಿ ನೆಲೆಸಬೇಕಾಗಿ ಬಂತು. ಬೇರೆ ಲೋಕದ ನಿವಾಸಿಗಳು ಪ್ರತಿನಿಧಿಗಳು ಈ ಭೂಮಿಯಲ್ಲಿ ಕಡ್ಡಾಯವಾಗಿ ಇಳಿಯಬೇಕಾಯಿತು. ಕೆಟ್ಟುಹೋದ ಅವರ ಗಗನ ನೌಕೆಗಳು ಭೂಮಿಯಿಂದ ವಾಪಸಾಗಲಿಲ್ಲ. ಅವರೆಲ್ಲಾ ಪರ್ವತಮಯ ಪ್ರದೇಶದಲ್ಲಿ ಉಳಿಯಬೇಕಾಯಿತು. ಅವರ ಬಳಿ ಕೆಟ್ಟ ನೌಕೆಗಳನ್ನು ಸರಿಪಡಿಸಲು ಇಲ್ಲವೇ ಹೊಸತನ್ನು ನಿರ್ಮಿಸಲು ಅಗತ್ಯವಾದ ಉಪಕರಣಗಳಿರಲಿಲ್ಲ. ಪರ್ವತ ನಿವಾಸಿಗಳು ಈ ಜನರನ್ನು ಕೊಲ್ಲಲು ಯತ್ನಿಸಿದರು. ಆಗ ಇವರೆಲ್ಲರೂ ಗವಿಗಳಲ್ಲಿ ಅಡಗಿ ಜೀವನ ಸಾಗಿಸಿದರು. ಇದೇ ಆ ತಟ್ಟೆಗಳಲ್ಲಿ ಅಡಕವಾಗಿರುವ ಸಾರಾಂಶ ! ಗವಿಗಳಲ್ಲಿ ಸಾಲಾಗಿ ನಿರ್ಮಿ

ಸಿರುವ ಸಮಾಧಿಗಳು ಗೋಡೆಗಳ ಮೇಲೆ ಬರೆದಿರುವ ಚಿತ್ರಗಳು, ಈ ಸಾಹಿತ್ಯವನ್ನು ಬೆಂಬಲಿಸುವ ಅಂಶಗಳಾಗಿವೆ. ಅಷ್ಟು ಮಾತ್ರವಲ್ಲದೆ, ಆ ಪರ್ವತ ಪ್ರದೇಶದಲ್ಲಿ ಪ್ರಚಲಿತವಿರುವ ಜಾನಪದ ಕತೆಗಳಲ್ಲಿ ಮೋಡದಿಂದ ಇಳಿದು ಬಂದ ದಪ್ಪ ತಲೆಯ ಕುಳ್ಳದೇಹದ ವ್ಯಕ್ತಿಗಳ ವಿವರಣೆಯಿದೆ.

ಹಾರುವ ತಟ್ಟೆಗಳ ರಹಸ್ಯವು ಬಯಲಾಗದೆ ಉಳಿಯಲಾರದು ; ಅದರೊಂದಿಗೇ ಬಾಹ್ಯಪ್ರಪಂಚದ ಬುದ್ಧಿಜೀವಿಗಳ ಅಸ್ತಿತ್ವವೂ ಬೆಳಕಿಗೆ ಬರುವ ಸಾಧ್ಯತೆ ಇದೆ.

## ಆಧಾರ ಲೇಖನಗಳು

1. Flying Saucers are back—*Paul O'neil* appeared in Life International Vol.40.No. 8 (also plates 1,2,3,4,5).
2. Do extraterrestrial life exist ?—*Felix Zigel* appeared in Soviet Land 14, 1970.
3. Popular Science Book Vol. 10.
4. How Life in outerspace is trying to contact us—*Kennth Dorn* appeared in Sunday Standard.
5. Flying Saucers—*Frank Edwards* appeared in Science Today Vol. 1, 2, 3 1967.
6. Arrival of extraterrestrial men to earth in ancient times—*Erick Deniken & Alexandar Kajnathsev* appeared in Sudha Feb. 1971.